

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೩ ಜುಲೈ ೨೦೦೭ ಸಂಚಿಕೆ : ೭




ಪರಮಪೂಜ್ಯ ಶ್ರೀ ಶ್ರೀಗಳವರ ಜನ್ಮ ಶತಮಾನೋತ್ಸವ ವರ್ಷಾಚರಣೆಯ ಅಂಗವಾಗಿ ಅಮೆರಿಕದ ವಾಷಿಂಗ್ಟನ್ ಡಿ.ಸಿ.ಯಲ್ಲಿ ಇತ್ತೀಚಿಗೆ ಏರ್ಪಡಿಸಲಾಗಿದ್ದ ಗುರುವಂದನೆ ಕಾರ್ಯಕ್ರಮವನ್ನು ಸಚಿವರಾದ ಶ್ರೀ ಬಸವರಾಜ ಹೊರಟ್ಟಿ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಡಾ. ಎಂ.ಎನ್. ಚನ್ನಬಸಪ್ಪ, ಕೆ.ಎ.ಎಸ್. ಹಿರಿಯ ಅಧಿಕಾರಿ ಶ್ರೀ ಮನು ಬಳಿಗಾರ್ ಮತ್ತು ಶ್ರೀ ಅಮರನಾಥ ಗೌಡ ಅವರು ಉಪಸ್ಥಿತರಿದ್ದರು.






ಜುಲೈ ೧೩ ರಂದು ನೆಲಮಂಗಲ ತಾಲ್ಲೂಕು ಭೈರನಾಯಕನಹಳ್ಳಿ ಪಾಳ್ಯದಲ್ಲಿ ನಿರ್ಮಾಣವಾಗಿರುವ ಅಂತರರಾಷ್ಟ್ರೀಯ ಉಚಿತ ಅನಾಥಾಲಯ ಹಾಗೂ ಪೂಜ್ಯ ಶ್ರೀಗಳವರ ಗುರುವಂದನ ಕಾರ್ಯಕ್ರಮವನ್ನು ಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸಚಿವರಾದ ಶ್ರೀ ಸಿ. ಚನ್ನಿಗಪ್ಪ ದಂಪತಿಗಳು ಹಾಗೂ ಗಣ್ಯರು ಉಪಸ್ಥಿತರಿದ್ದರು.

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ' ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಸೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೩ ಜುಲೈ ೨೦೦೭ ಸಂಚಿಕೆ : ೭

## ಒಳಪುಟಗಳಲ್ಲಿ ......................



ಚಂದಾ ವಿವರ :
ವಾರ್ಷಿಕ ಚಂದಾ ರೂ. ೧೨೦/- ಆಜೀವ ಸದಸ್ಯತ್ವ ರೂ. ೧೦೦೦/-
ಬಿಡಿ ಪ್ರತಿ ರೂ. ೧೦.೦೦

## ಮಹತ್ವದ ಮೈಲಿಗಲ್ಲು

ಆತ್ಮೀಯರೇ,

'ಸಿದ್ಧಗಂಗೆ ಮಠದ ಸುದೀರ್ಘ ಇತಿಹಾಸದಲ್ಲಿ ಮೊದಲ ಬಾರಿಗೆ (೨೪-೦೬-೨೦೦೭) ಪಂಚಪೀಠಕ್ಕೆ ಸೇರಿದ ಧರ್ಮಗುರುಗಳು ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಗೌರವ ಸಮರ್ಪಣೆ ಮಾಡಿದರು. ಶ್ರೀಗಳವರು ಬೇಗ ಗುಣಮುಖವಾಗಲೆಂದು ಹಾರೈಸಿದರು. ಈ ಸಂದರ್ಭದಲ್ಲಿ ಮಾತಾಡಿದ ಬಾಳೆಹೊನ್ನೂರು ರಂಭಾಪುರಿಯ ಶ್ರೀ ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯಸ್ವಾಮಿಗಳು 'ಇದೊಂದು ಅಪೂರ್ವ ಗಳಿಗೆ' ಎಂದು ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಾ, ಸಿದ್ಧಗಂಗಾ ಶ್ರೀಗಳವರು ತ್ರಿವಿಧ ದಾಸೋಹಿಗಳು ಸಮಾಜಕ್ಕೆ ಅತ್ಯಮೂಲ್ಯ ಸೇವೆ ಸಲ್ಲಿಸುತ್ತಿರುವ ಆದರ್ಶಮೂರ್ತಿಗಳೆಂದು ನುಡಿದರು. ಉಜ್ಜಯನಿಯ ಶ್ರೀಮರುಳ ಸಿದ್ಧೇಶ್ವರ ಶಿವಾಚಾರ್ಯ ಸ್ವಾಮಿಗಳು ತಾವು ಶ್ರೀಮಠದ ಹಳೆಯ ವಿದ್ಯಾರ್ಥಿಗಳೆಂದು ತಾವಿದ್ದ ದಿನಗಳ ಅನುಭವಗಳನ್ನು ಸ್ಮರಿಸಿಕೊಳ್ಳುವುದರ ಮೂಲಕ ತಮ್ಮ ಅಭಿಮಾನವನ್ನು ವ್ಯಕ್ತಪಡಿಸಿದರು. ಪರಮಪೂಜ್ಯರೊಡನೆ ಸಮಾಜದ ಅಭಿವೃದ್ಧಿಗಾಗಿ ಚಿಂತನೆ ನಡೆಸಿದರು. ಶ್ರೀಮಠದ ಸಾಮೂಹಿಕ ಪ್ರಾರ್ಥನಾ ಸಭೆಯಲ್ಲಿ ಜಗದ್ಗುರುಗಳು ಆಶೀರ್ವಚನ ನೀಡಿ ತಮಗಾಗಿರುವ 'ಆನಂದ'ವನ್ನು ತಿಳಿಸಿದರು. ಆಚಾರ್ಯ ಪೀಠದವರು ಶ್ರೀಗಳವರನ್ನು ಸಂಧಿಸಿದ್ದು ಏನೆಲ್ಲ ಹರ್ಷವನ್ನು ಸಮಾಜ ಬಂಧುಗಳಲ್ಲಿ ಉಂಟು ಮಾಡಿತು. ಅವಿಸ್ಮರಣೀಯವಾಯಿತು. 'ಸಿದ್ಧಗಂಗಾ' ಈ ಐತಿಹಾಸಿಕ ಭೇಟಿಯನ್ನು ತುಂಬು ಹೃದಯದಿಂದ ಅಭಿನಂದಿಸುತ್ತದೆ.

ಪರಮಪೂಜ್ಯ ಶ್ರೀ ಶ್ರೀಗಳವರು ದಿನಾಂಕ ೧೮-೦೬-೨೦೦೭ರಿಂದ ೨೩-೦೬-೨೦೦೭ರವರೆಗೆ ದೇಹಾರೋಗ್ಯದ ವ್ಯತ್ಯಯದಿಂದ ಬೆಂಗಳೂರಿನ ಸುಪ್ರಸಿದ್ಧ ಮಣಿಪಾಲ್ ಆಸ್ಪತ್ರೆಯಲ್ಲಿ ಚಿಕಿತ್ಸೆಗಾಗಿ ತಂಗಿದ್ದರು. ಆಸ್ಪತ್ರೆಯ ವೈದ್ಯರಾದಿಯಾಗಿ ಸಕಲರೂ ಶ್ರೀಗಳವರನ್ನು ಭಕ್ತಿ ಶ್ರದ್ಧೆಗಳಿಂದ ಉಪಚರಿಸಿದರು. ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ಹೆಚ್.ಡಿ. ಕುಮಾರಸ್ವಾಮಿಯವರು, ಮಾಜಿ ಪ್ರಧಾನಿಗಳಾದ ಶ್ರೀ ಹೆಚ್.ಡಿ. ದೇವೇಗೌಡರು, ರಾಜ್ಯಪಾಲರಾದ ಶ್ರೀ ಟಿ.ಎನ್. ಚತುರ್ವೇದಿಯವರು, ಕೇಂದ್ರ ಸರ್ಕಾರ ಸಚಿವರಾದ ಶ್ರೀ ಶಿವರಾಜ್ ಪಾಟೀಲ್ ಅವರು, ಮಹಾರಾಷ್ಟ್ರದ ರಾಜ್ಯಪಾಲರಾದ ಶ್ರೀ ಎಸ್.ಎಂ. ಕೃಷ್ಣ ಅವರೂ, ಮಾಜಿ ಸಚಿವರೂ, ಶಾಸಕರೂ ಆದ ಶ್ರೀ ವಿ. ಸೋಮಣ್ಣನವರು ಮತ್ತು ಶ್ರೀ ಬಿ.ಎಸ್. ಪರಮಶಿವಯ್ಯನವರು. ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪನವರು, ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು, ಡಾ॥ ಬಿ. ಶಿವಪ್ಪನವರು, ನಿವೃತ್ತ ಐ.ಜಿ.ಪಿ. ಶ್ರೀ ಎಲ್. ರೇವಣಸಿದ್ಧಯ್ಯನವರು, ಪೂಜ್ಯ ಸುತ್ತೂರು ಶ್ರೀಗಳು, ಚಿತ್ರದುರ್ಗದ ಪೂಜ್ಯ ಶ್ರೀಗಳು, ಕನಕಪುರ ದೇಗುಲಮಠದ ಪೂಜ್ಯ ಶ್ರೀಗಳು, ಬೇಲಿಮಠದ ಪೂಜ್ಯ ಶ್ರೀಗಳು ಮತ್ತು ವಿವಿಧ ಮಠಾಧಿಪತಿಗಳು, ಗಣ್ಯಮಾನ್ಯ ಅಧಿಕಾರಿಗಳು, ಭಕ್ತಾದಿಗಳು ಶ್ರೀಗಳವರ ದರ್ಶನ ಪಡೆದು ಬಹುಬೇಗ ಗುಣಮುಖರಾಗಲಿ ಎಂದು ಹಾರೈಸಿದರು. ಸುದ್ದಿ ಮಾಧ್ಯಮದ ಬಂಧುಗಳು ಶ್ರೀಗಳವರ ಆರೋಗ್ಯ ಸ್ಥಿತಿಯನ್ನು ರಾಜ್ಯದ ಜನತೆಗೆ ತಿಳಿಸುವಲ್ಲಿ ವಹಿಸಿದ ಆಸಕ್ತಿ ವಿಶೇಷವಾದದ್ದು. ಪೂಜ್ಯ ಕಿರಿಯ ಶ್ರೀಗಳಂತೂ ತಮ್ಮ ಗುರುವರೇಣ್ಯರ ಆರೋಗ್ಯ ಸುಧಾರಿಸುವುದಕ್ಕೆ ಸರ್ವ ವಿಧದ ಸೇವೆಯನ್ನು ಅರ್ಪಿಸಿದರು. ಶ್ರೀಮಠದ ಸೇವಾ ಸಿಬ್ಬಂದಿ, ಶಿಕ್ಷಕ ಸಮುದಾಯ, ವಿದ್ಯಾರ್ಥಿಗಳು ನಡೆದುಕೊಂಡ ರೀತಿ ಅಪೂರ್ವವೆನಿಸಿತು. ಇದೀಗ ಪರಮಪೂಜ್ಯ ಶ್ರೀಗಳವರು ಗುಣಮುಖರಾಗಿದ್ದಾರೆ. ಎಂದಿನಂತೆ ದೈನಂದಿನ ದಾಸೋಹಾದಿ ಕಾರ್ಯಗಳಲ್ಲಿ ನಿರತರಾಗಿದ್ದಾರೆ. 'ಸಿದ್ಧಗಂಗಾ' ಶ್ರೀಗಳವರ ಆರೋಗ್ಯ ಸಮಸ್ಥಿತಿಗಾಗಿ ಸೇವೆ ಮಾಡಿದ, ಹಾರೈಸಿದ ಸಮಸ್ತರಿಗೂ ವಂದನೆಗಳನ್ನು ಸಲ್ಲಿಸುತ್ತದೆ.

– ಸಂಪಾದಕ





ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

*ಜ್ಞಾನಜ್ಯೋತಿಯುದಯವು, ಭಾನುಕೋಟಿ*
*ಸೂರ್ಯರ ಬೆಳಗು ನೋಡಾ*
*ತನುತ್ರಯ ಜೀವತ್ರಯ ಅವಸ್ಥಾತ್ರಯಾಅದಿಯಾದ*
*ಎಲ್ಲಾ ತೋರಿಕೆಯನೊಳಕೊಂಡು*
*ಜ್ಯೋತಿ ಕರ್ಪೂರವನೊರೆದಂತಿದೆ ನೋಡಾ*
*ಷಡಾಧಾರಂಗಳಲಿ ತೊಳಗಿ ಬೆಳಗಿ*
*ಬ್ರಹ್ಮರಂಧ್ರದಲ್ಲಿ ವಿಶ್ರಾಂತಿಯನೈದಿಧ*
*ಅಖಂಡ ಜ್ಞಾನಜ್ಯೋತಿ ನೋಡಾ.*
*ಮಹಾಪ್ರಕಾಶದ ಬೆಳಗಿನೊಳಗೆ ಮಹವ ಕಂಡು*
*ಅ ಮಹಕ್ಕೆ ಮಹವಾಗಿ ಪರಕ್ಕೆ ಪರವಾಗಿ*
*ಎನ್ನಿಂದನ್ಯವಾಗಿ ಮತ್ತೊಂದು ಪರವಿಲ್ಲದೆ*
*ತಾನೇ ಪರವಸ್ತುವಾಗಿರ್ದೆನು ಕಾಣಾ*
*ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.*

ಶರಣನ ಅಂತರಂಗದಲ್ಲಿ ಅರಿವಿನ ದೀಪ ಪ್ರಕಾಶ. ಅದು ಕೋಟಿ ಸೂರ್ಯರ ಪ್ರಭೆನೊಳಕೊಂಡಿದೆ. ಅದುವೆ ಶರಣನ ಅಂತರಂಗ ಬಹಿರಂಗದಲ್ಲಿ ಪರಿಪೂರ್ಣವಾಗಿದೆ. ಆ ಜ್ಞಾನ ಪ್ರಕಾಶವು ಶರಣನ ತನುತ್ರಯ, ಜೀವತ್ರಯ, ಅವಸ್ಥಾತ್ರಯಗಳ ಸಮಸ್ತ ಕಾಣಿಕೆಗಳನ್ನು ಇಷ್ಟಪ್ರಾಣಭಾವ ಲಿಂಗಗಳಲ್ಲಿ ತುಂಬಿಕೊಂಡು ಜ್ಯೋತಿಯು ಕರ್ಪೂರವ ಮುಟ್ಟಿ ತನ್ನೊಳಗೆ ಇರಿಸಿಕೊಳ್ಳುವಂತೆ ಸಕಲ ತೋರಿಕೆಗಳನ್ನು ತನ್ನ ಸ್ವರೂಪವನ್ನಾಗಿಸಿಕೊಂಡಿದೆ. ತ್ರಿಲಿಂಗ ಸ್ವರೂಪವಾದ ಆ ಸ್ವಯಂ ಜ್ಯೋತಿಯು ಷಟ್‌ಚಕ್ರಗಳಲ್ಲಿ ಷಡ್ಲಿಂಗ ಸ್ವರೂಪದಲ್ಲಿ ಪ್ರಕಾಶಿಸುತ್ತ ಬ್ರಹ್ಮರಂಧ್ರದ ಸಹಸ್ರದಳ ಕಮಲಕರ್ಣಿಕಾಗ್ರದಲ್ಲಿ ಪರಿಪೂರ್ಣವಾಗಿದೆ. ಅದರ ಅರಿವಿನ ಜ್ಯೋತಿಯ ಪ್ರಭೆಯ ಪ್ರಕಾಶದಲ್ಲಿ ಆ ಮಹಾಬ್ರಹ್ಮನನ್ನು ಜ್ಞಾನದ ಕಣ್ಣಿನಿಂದ ನೋಡಿ ಅದಕ್ಕಿಂತಲೂ ಅಧಿಕವಾಗಿ ನಾನೇ ಪರಬ್ರಹ್ಮವಾಗಿದ್ದುದನು ಕಂಡೆ – ನೆನ್ನುತ್ತದೆ ವಚನ

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ– ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ – ಡಂಬಳ– ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಇಂದ್ರಿಯ ಮುಖಿಗಳಿಗೆ ಒಳಗೊಳಗೆ ಮರುಗಿದೆ
ಆತ್ಮರಾಮರ ಕಂಡು ಸುಖಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಿಡ್ಡಮನದವರನು ದೊಡ್ಡವರ ಮಾಡಿದೆ
ಗುಡ್ಡಗುಣಿಗಳನೆನಿಸಿ ತೋರಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅವತರಣವೆನ್ನಲೆ ಉತ್ತರಣವೆನ್ನಲೆ
ಸತ್ಯಶಿವಶರಣತವಚರಣ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೇವಾ ಶ್ರೀಗಂಧವೆ ಸೇವಾ ಕರ್ಪೂರವೆ
ಸೇವಾ ಮಣಿಹದ ಶಿವಸಲಿಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಓದಿಗೆ ಕೊನೆಯುಂಟೆ ಅರಿವಿಗೆ ಕೊನೆಯುಂಟೆ
ಸಾಧನೆಗೆ ಉಂಟೆ ಕೊನೆಯೆಂಬ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹುರಿದ ಬಿತ್ತವಾಗಿ ಕರಿದ ಕಜ್ಜಾಯವಾಗಿ
ಗುರುವಾದೆ ಸಾವಿರ ಚಣ್ಣರಿಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಸಾಗರವೆಂದೆ ಜ್ಞಾನ ಶ್ರೀಗಿರಿಯೆಂದೆ
ಜ್ಞಾನಜಗದಗಲ ಮಿಗಿಲೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣಸತಿಯೆಂಬರು ಲಿಂಗಪತಿಯೆಂಬರು
'ಶರಣಲಿಂಗ' ನಿನ್ನನೇನಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಕಬಂಧುವಾದೆ ಲೋಕದ ಕಣ್ಣಾದೆ
ಲೋಕಪೂಜ್ಯನಾಗಿ ಬೆಳಗಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಋತು ನಂಬಿನಡೆದಿರುವೆ ಋತುವನಾರಾಧಿಸುವೆ
ಋತುವೊಂದೆ ಹರರೂಪಿ ಎನುತಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ



## ಆನಂದ

ಕೆಲವು ದಿನಗಳ ಹಿಂದೆ ದೇಹಾರೋಗ್ಯದಲ್ಲಿ ವ್ಯತ್ಯಾಸವಾಯಿತು. ತನುವಿನಲ್ಲಿ ತ್ರಾಸ ಕಾಣಿಸಿಕೊಂಡಿತು. ಉಸಿರಾಟದಲ್ಲಿ ಏರು ಪೇರಾಯಿತು. ಕಫ ಕಟ್ಟಿಕೊಂಡು ತೊಂದರೆಯಾಯಿತು. ಒಮ್ಮೆಗೆ ಚಳಿ ಪ್ರಾರಂಭವಾಯಿತು. ದೈನಂದಿನ ಚಟುವಟಿಕೆಗಳಲ್ಲಿ ತೊಡಗುವುದಕ್ಕೆ ದುಸ್ತರವಾಯಿತು. ಆಪ್ತರು, ಆತ್ಮೀಯರು, ಹಿತೈಷಿಗಳು, ಅಭಿಮಾನಿಗಳು ಓಡೋಡಿ ಬಂದರು. ಗಾಬರಿಗೊಂಡರು. ಒತ್ತಾಯದಿಂದ ಬೆಂಗಳೂರಿನ ಮಣಿಪಾಲ್ ಆಸ್ಪತ್ರೆಗೆ ಕರೆದೊಯ್ದರು. ಆಸ್ಪತ್ರೆಗೆ ಅಡ್ಮಿಟ್ ಮಾಡಿಸಿದರು. ಪರೀಕ್ಷೆ ಮಾಡಿಸಿದರು. ಒಂದು ದಿನ ಆಸ್ಪತ್ರೆಯಲ್ಲೇ ಉಳಿಯಬೇಕಾಗುತ್ತದೆ ಎಂದು ಹೇಳಿ ಐದು ದಿನಗಳವರೆಗೆ ಅಲ್ಲಿಯೇ ಇರುವಂತೆ ವ್ಯವಸ್ಥೆಗೊಳಿಸಿದರು.. ಅಲ್ಲಿನ ಡಾಕ್ಟರುಗಳು ಸೂಕ್ತ ಚಿಕಿತ್ಸೆ ನೀಡಿದರು. ನರ್ಸ್‌ಗಳು, ಪರಿಚಾರಕರು ಪ್ರೀತಿಯಿಂದ ನೋಡಿಕೊಂಡರು. ಅವರೆಲ್ಲರಲ್ಲಿನ ಸೇವಾಧರ್ಮವನ್ನು ಕಂಡು ಸಂತೋಷವಾಯಿತು. ನಮ್ಮ ಪೂಜಾದಿ ವಿಧಿಗಳಿಗೆ ವ್ಯತ್ಯಯವಾಗದಂತೆ ತಮ್ಮದೇ ಆದ ಅತಿಥಿಗೃಹದಲ್ಲಿ ಒಳ್ಳೆಯ ಏರ್ಪಾಡು ಮಾಡಿದರು. ಕ್ಷಣ ಕ್ಷಣಾರ್ಧವೂ ಕಣ್ಣಲ್ಲಿ ಕಣ್ಣಿಟ್ಟು ಆರೈಕೆ ಮಾಡಿದರು. ನೋಡಲು ಬರುತ್ತಿದ್ದ ಗಣ್ಯಮಾನ್ಯರಿಗೆ, ಭಕ್ತಾದಿಗಳಿಗೆ ಅವಕಾಶ ಕಲ್ಪಿಸಿಕೊಡುತ್ತಿದ್ದ ರೀತಿಯಂತೂ ಸ್ಮರಣೀಯ. ಆಸ್ಪತ್ರೆಯನ್ನು ಬಿಟ್ಟು ಬರುವ ಸಂದರ್ಭದಲ್ಲಿ ಪುಟ್ಟದೊಂದು ಸಮಾರಂಭವನ್ನೇ ಏರ್ಪಡಿಸಿ ತಮ್ಮ ಸುಸಂಸ್ಕೃತಿಯನ್ನು ಪರಿಚಯಿಸಿಕೊಟ್ಟರು. ಐದೂ ದಿನಗಳು ಹಗಲಿರುಳೆನ್ನದೆ ಸೇವೆ ಮಾಡಿದ ಸೇವಾಮರಿಗಳನ್ನು, ಮಠಾಧೀಶರನ್ನು, ಗುಣಮುಖರಾಗಲಿ ಎಂದು ವಿವಿಧ ರೀತಿಯಲ್ಲಿ ಪೂಜೆ, ಪ್ರಾರ್ಥನೆ, ಅಭಿಷೇಕಾದಿಗಳನ್ನು ಮಾಡಿದ ಭಕ್ತ ಸಮೂಹವನ್ನು ಶ್ರೀಮಠದ ಸಾವಿರ ಸಾವಿರ ಮಕ್ಕಳು ನಾವು ಶ್ರೀಮಠಕ್ಕೆ ಹಿಂತಿರುಗಿ ಬಂದ ಸಂದರ್ಭದಲ್ಲಿ ವ್ಯಕ್ತಪಡಿಸಿದ ಸಂತೋಷ, ಸಡಗರ, ಸಂಭ್ರಮ, ಉಲ್ಲಾಸವನ್ನು ನೆನೆದಾಗ ಆಗುವ 'ಆನಂದ' ನಮ್ಮ ಆರೋಗ್ಯದ ಸಂಜೀವಿನಿ ಎಂದೇ ಭಾವಿಸುತ್ತೇವೆ.

*





## ಮಾನವತಾವಾದಿ ಬಸವಣ್ಣ

– ಬಸವರಾಜ ಹೂಗಾರ, ಮುಕ್ಕಾಂ ಹಿರೇಸಂಗನಗುತ್ತಿ, ಹುನಗುಂದ ತಾ॥, ಬಾಗಲಕೋಟ–587154.

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರು ಕೈಗೊಂಡ ಧಾರ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ಕ್ರಾಂತಿ ಅಪೂರ್ವವಾದದ್ದು. ಜನಹಿತದ ದೃಷ್ಟಿಯಿಂದ ಮೂಡಿಬಂದ ಅವರ ವಚನ ಸಾಹಿತ್ಯ ಸೃಷ್ಟಿ ಇತಿಹಾಸದಲ್ಲಿ ಅಚ್ಚಳಿಯದ ಅಧ್ಯಾಯವಾಗಿದೆ. ಶರಣರ ಅಂತರಂಗದಿಂದ ಹೊರಹೊಮ್ಮಿದ ಜೀವನಾನುಭವದ ಅಭಿವ್ಯಕ್ತಿಯೇ ವಚನಗಳಾದವು. ಇವು ಮಾನವೀಯ ಮೌಲ್ಯಗಳನ್ನು ಬಿಂಬಿಸಿ, ಸಾರ್ವಕಾಲಿಕ ಸತ್ಯದ ಸಂದೇಶವನ್ನು ನೀಡಲು ಸಹಕಾರಿಯಾಗಿವೆ. ವಿಶ್ವಸಾಹಿತ್ಯದ ಆತ್ಮದಂತಿರುವ ವಚನಗಳು ಮಾನವನ ಭಾವೀ ಬಾಳಿಗೆ ಬೆಳಕನ್ನೀಡುವ ಜ್ಞಾನಜ್ಯೋತಿಗಳಾಗಿವೆ.

ಬಸವಣ್ಣನವರು ಅನುಭವಮಂಟಪದಲ್ಲಿ ಸ್ತ್ರೀ ಪುರುಷ ರೆನ್ನದೆ ಎಲ್ಲರಿಗೂ ತಮ್ಮ ಅನುಭವವನ್ನು ಅರುಹಲು ಅವಕಾಶಮಾಡಿಕೊಟ್ಟಿದ್ದರಿಂದ ಅಂದು ಅನೇಕ ವಚನ ಕಾರರು ಬೆಳಕಿಗೆ ಬರಲು ಸಾಧ್ಯವಾಯಿತು. ಅವರು ಜಾತಿ, ಮತ, ವರ್ಗ, ವರ್ಣಗಳ ಭೇದವಿಲ್ಲದೆ ಎಲ್ಲರಿಗೂ ಅನುಭವ ಮಂಟಪದಲ್ಲಿ ಭಾಗವಹಿಸಲು ಆಸ್ಪದ ಮಾಡಿಕೊಟ್ಟರು. ಕೆಳವರ್ಗದಿಂದ ಬಂದ ಮದ್ದಳೆ ಬಾರಿಸುವ ಅಲ್ಲಮ ಪ್ರಭುವಿನ ಆಧ್ಯಾತ್ಮ ಸಾಧನೆಗೆ ಮೆಚ್ಚಿ ಅವರನ್ನು ಅನುಭವ ಮಂಟಪದಲ್ಲಿನ ಶೂನ್ಯ ಪೀಠಕ್ಕೆ ಅಧ್ಯಕ್ಷರನ್ನಾಗಿ ಮಾಡಿದರು. ಸಮಾಜದಲ್ಲಿನ ಅನಿಷ್ಟ ಪದ್ಧತಿ, ಮೂಢನಂಬಿಕೆಗಳನ್ನು ತೊಲಗಿಸಲು ಹಡಪದ ಅಪ್ಪಣ್ಣ ನನ್ನು ತಮ್ಮ ಆಪ್ತ(ಕಾರ್ಯದರ್ಶಿ) ಸಮಾಲೋಚಕನನ್ನಾಗಿ ಮಾಡಿಕೊಂಡರು. ಅಣ್ಣನವರ ಮಾರ್ಗದರ್ಶನದಿಂದ ಅನೇಕ ಚೋರ(ಕಳ್ಳ)ರು ಚರ(ಜಂಗಮ)ರಾದರು. ಶತಶತಮಾನಗಳಿಂದ ಪುರುಷರ ಭೋಗದ ವಸ್ತುವಾಗಿ ದೈಹಿಕ ಶೋಷಣೆಗೆ ಒಳಗಾಗಿದ್ದ ಅನೇಕ ಪಣ್ಯಾಂಗನೆ (ವೈಶ್ಯೆ)ಯರು ಪರಿವರ್ತನೆಗೊಂಡು ಪರಿಶುದ್ಧ ಜೀವನ ಸಾಗಿಸಿ ಪುಣ್ಯಾಂಗನೆ(ಶರಣೆ)ಯರಾದರು. ಇದೇ ರೀತಿ ಸಮಾಜದ ನಿರ್ಲಕ್ಷ್ಯಕ್ಕೆ ಒಳಗಾಗಿ ಊರ ಹೊರಗೆ ವಾಸಿಸುತ್ತಿದ್ದ ಡೋಹರ ಕಕ್ಕಯ್ಯ, ಸಮಗಾರ ಹರಳಯ್ಯ ಮುಂತಾದವರು ಸಹ ಶರಣರಾದರು.

ಬಸವಣ್ಣನವರು ಜಾತಿ, ಕುಲಗಳು ಮನುಷ್ಯ ಮಾಡುವ ಆಯಾ ಉದ್ಯೋಗಗಳ ಮೇಲೆ ಬಂದಿವೆ ಎಂಬ ನಿಜಸಂಗತಿಯನ್ನು ನಿವೇದಿಸಿದರು. ಮನುಷ್ಯ ತನ್ನ ಸ್ವಾರ್ಥ ಮತ್ತು ಸಂಕುಚಿತ ಭಾವನೆಯಿಂದ ಜಾತಿ ಮತವೆಂಬ ಕೃತಕ ವ್ಯವಸ್ಥೆಯನ್ನು ನಿರ್ಮಿಸಿಕೊಂಡಿದ್ದಾನೆಂದು ತಿಳಿಸಿದರು. ಅವರ ಈ ಅಪೂರ್ವವಾದ ಸಾಮಾಜಿಕ ಕ್ರಾಂತಿ ಜನಜೀವನದಲ್ಲಿ ನವ ಚೈತನ್ಯವನ್ನುಂಟು ಮಾಡಿತು. ಅಜ್ಞಾತ ಅನುಭಾವಿಗಳಲ್ಲಿ ಅಸಹಾಯಕ ಅಂಗನೆಯರಲ್ಲಿ ಆಶಾಕಿರಣ ಮೂಡಿಸಿತು. ಜಾತಿಯನ್ನು ಬಿಟ್ಟು, ನೀತಿ ಮತ್ತು ಮಾನವೀಯತೆಗೆ ಬೆಲೆ ಕೊಟ್ಟ ಬಸವಣ್ಣನವರ ಅಮರ ಜೀವನ ಮನುಕುಲಕ್ಕೆ ಮಾರ್ಗದರ್ಶಕವಾಗಿದೆ. ನಾವೀಗ ಅವರ ಮಹೋನ್ನತ ವ್ಯಕ್ತಿತ್ವವನ್ನು ಅರಿಯುವುದು ಅವಶ್ಯಕವಾಗಿದೆ.

ಕಲ್ಯಾಣರಾಜ್ಯದ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿ ಗಳಾಗಿದ್ದ ಬಸವಣ್ಣನವರು ತಮ್ಮ ಅಧಿಕಾರ, ಅಂತಸ್ತಿನ ಅಹಮಿಕೆಯಿಲ್ಲದೆ ವಿನಯದಿಂದ ವರ್ತಿಸುತ್ತಿದ್ದರು. ಬಾಗಿದ ತಲೆ–ಮುಗಿದ ಕೈ ಅವರ ಹೆಗ್ಗುರುತಾಗಿತ್ತು. ಅವರು ಮೊದಲು ಸಮಾಜದಲ್ಲಿ ಆಳವಾಗಿ ಬೇರೂರಿದ ಜಾತಿ, ಕುಲವೆಂಬ ವಿಷವೃಕ್ಷವನ್ನು ಕಡಿದೊಗೆಯಬೇಕೆಂದು ನಿರ್ಧರಿಸಿದರು. ಜಾತಿ ಕುಲಗಳು ಹುಟ್ಟಿನಿಂದ ಬರದೆ ವ್ಯಕ್ತಿಗಳು ಮಾಡುವ ಆಯಾ ಉದ್ಯೋಗಗಳ ಆಧಾರದ ಮೇಲೆ ಬಂದಿವೆಯೆಂದು ಈ ವಚನದ ಮೂಲಕ ಜನರಿಗೆ ಮನವರಿಕೆ ಮಾಡಿಕೊಟ್ಟರು

*'ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ*
*ಜಲಬಿಂದುವಿನ ವ್ಯವಹಾರ ಒಂದೇ ;*
*ಆಶೆಯಾಮಿಷ, ರೋಷ ಹರುಷ ವಿಷಯಾದಿಗಳೆಲ್ಲಾ ಒಂದೇ ;*
*ಏನನೋದಿ ಏನ ಕೇಳಿದರೇನು ಫಲ ?*
*ಕುಲಜರೆಂಬುದಕ್ಕೆ ಯಾವುದು ದೃಷ್ಟ ?*
*'ಸಪ್ತಧಾತು ಸಮಪಿಂಡಂ, ಸಮಯೋನಿ ಸಮುದ್ಭವಂ*
*ಆತ್ಮಜೀವ ಸಮಾಯುಕ್ತಂ, ವರ್ಣಾನಾಂಕಿಂ ಪ್ರಯೋಜನಂ'*
*ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ*
*ಹಾಸನಿಕ್ಕಿ ಸಾಲಿಗನಾದ; ವೇದವನೋದಿ ಹಾರುವನಾದ*

*ಕರ್ಣದಲಿ ಜನಿಸಿದವರುಂಟೆ ಜಗದೊಳಗೇ*
*ಇದು ಕಾರಣ ಕೂಡಲಸಂಗಮದೇವಾ ;*
*ಲಿಂಗಸ್ಥಲವನರಿದವನೆ ಕುಲಜನು.*

ದೇವರು ಈ ಜಗತ್ತಿನಲ್ಲಿ ಎಲ್ಲ ಮಾನವರನ್ನು ಸಮಾನವಾದ ಅವಯವಗಳಿಂದ ಸೃಷ್ಟಿಮಾಡಿದ್ದಾನೆ. ಜೀವಸೃಷ್ಟಿಯ ವಿಕಾಸದ ದೃಷ್ಟಿಯಿಂದ ಹೆಣ್ಣು, ಗಂಡನ್ನು ಹುಟ್ಟಿಸಿದ್ದಾನೆ. ಇವೇ ಭಗವಂತನು ನಿರ್ಮಿಸಿದ ಎರಡು ಜಾತಿಗಳು. ಆದರೆ ಮಾನವನಿಂದು ತನ್ನ ಸಂಕುಚಿತ ಮನೋಭಾವನೆ ಮತ್ತು ಸ್ವಾರ್ಥದಿಂದ ನೂರಾರು ಜಾತಿ-ಉಪಜಾತಿಗಳನ್ನು ಕಲ್ಪಿಸಿಕೊಂಡಿದ್ದಾನೆ. ಮೇಲು ಕೀಳೆಂಬ ಕಳವಳದ ಕಾಳ ಕತ್ತಲೆಯಲ್ಲಿ ಕಾಲ ಕಳೆಯುತ್ತಿದ್ದಾನೆ. ಜಾತಿ-ಕುಲಗಳು ಮನುಷ್ಯ ಮಾಡುವ ಆಯಾ ಉದ್ಯೋಗದಿಂದ ಹುಟ್ಟಿ ಬಂದಿವೆಯೆಂಬುದು ಅಣ್ಣನವರ ಅಭಿಮತವಾಗಿತ್ತು. ಕಬ್ಬಿಣ ಕಾಸಿ ಉಪಕರಣ ಮಾಡುವವ ಕಮ್ಮಾರನಾದರೆ, ಮೈಲಿಗೆ ಬಟ್ಟೆಯನ್ನು ಬೀಸಿ ಬಂಡೆಗೆ ಒಗೆದು ಸ್ವಚ್ಛಗೊಳಿಸುವವ ಮಡಿವಾಳನಾದ, ವೇದವನ್ನು ಓದಿದವನು ಬ್ರಾಹ್ಮಣನಾದ ಇವರೆಲ್ಲರೂ ಸ್ತ್ರೀಯರ ಯೋನಿಯಿಂದಲೇ ಜನಿಸಿ ಬಂದವರು. ಆದರೆ ಯಾರೂ ಕಿವಿಯಿಂದ ಜನಿಸಿ ಬಂದವರಲ್ಲರೆಂಬುದನ್ನು ತಿಳಿಸಿದರು. ಮನುಷ್ಯನಿಗೆ ಬೆಲೆ ಬರುವುದು ಅವನ ಒಳ್ಳೆಯ ಗುಣ ಹಾಗೂ ಸಂಸ್ಕಾರದಿಂದ ಎಂದು ನಿಜವಾದ ಸಂಗತಿಯನ್ನು ನಿರೂಪಿಸಿದರು. ಸಮಾನತೆಯ ಸಂಕೇತವಾದ ಹಾಗೂ ತನ್ನ ಅರಿವಿನ ಕುರುಹಾದ(ಬ್ರಹ್ಮಾಂಡದ ಕಿರುರೂಪ) ಲಿಂಗವನ್ನು ಅರಿತವನೇ ಕುಲಜನೆಂದು ಸಾರಿದರು.

*'ನೆಲವೊಂದೇ ಹೊಲಗೇರಿ ಶಿವಾಲಯಕ್ಕೆ,*
*ಜಲವೊಂದೇ ಶೌಚಾಚಮನಕ್ಕೆ ;*
*ಕುಲಒಂದೇ ತನ್ನ ತಾನರಿದವಂಗೆ ;*
*ಫಲ ಒಂದೇ ಷಡುದರ್ಶನ ಮುಕ್ತಿಗೆ ;*
*ನಿಲುವು ಒಂದೇ ಕೂಡಲಸಂಗಮದೇವಾ*
*ನಿಮ್ಮನರಿದವಗೆ'*

ಎಂದು ಹೇಳಿ ಅಣ್ಣನವರು ಸಮಾಜದಲ್ಲಿಯ ಜಾತೀಯತೆಯ ಭೂತ ಬಡಿದುಕೊಂಡ ಜನರ ಕಣ್ಣು ತೆರೆಸಿದರು. ಊರ ಹೊರಗಿನ ಹೊಲಗೇರಿ ಇರುವ ನೆಲ ಹಾಗೂ ಊರೊಳಗೆ ಶಿವಾಲಯ ಕಟ್ಟಿದ ನೆಲ ಒಂದೇ; ದೇವಾಲಯದಲ್ಲಿ ತೀರ್ಥದಂತೆ ಉಪಯೋಗಿಸುವುದುಂಟು ಎಂದರು. ಇದೇ ರೀತಿ ತನ್ನ ತಾ ಅರಿತವನಿಗೆ ಕುಲ ಒಂದೇ ಆಗಿದೆ. ಆರು ದರ್ಶನಗಳ ಗುರಿ, ಮತ್ತು ಸಾರ ಮುಕ್ತಿಯನ್ನು ಪಡೆಯುವುದೇ ಆಗಿದೆ. ದೇವರನ್ನು ಅರಿತ ಮನುಷ್ಯನಿಗೆ ಮಾನವಕುಲ ಒಂದೇ ಎಂದು ತಿಳಿದಿರುತ್ತದೆ ಎಂದು ಬಸವಣ್ಣನವರು ಹೇಳಿ ಜಾತೀಯತೆಯ ಜಾಡ್ಯವನ್ನು ಜನರಿಂದ ತೊಲಗಿಸಲು ಯತ್ನಿಸಿದರು.

ಅಂದು ಜನರು ಹೊಲೆಯ ಮಾದಿಗರನ್ನು ಊರ ಹೊರಗಿನ ಜಾಗದಲ್ಲಿ ವಾಸ ಮಾಡಲು ಏರ್ಪಾಟು ಮಾಡಿದ್ದರು. ಅವರು ಊರೊಳಗೆ ಬಂದರೆ ಮೈಲಿಗೆಯಾಗುತ್ತದೆ ಎಂಬ ಭಾವನೆಯನ್ನು(ತಾಳಿದ್ದರು) ಹೊಂದಿದ್ದರು. ಬಸವಣ್ಣನವರು ಇದನ್ನು ಅರಿತು ಮನದಲ್ಲಿ ಮರುಗಿದರು. ನಿಜವಾದ ಹೊಲೆಯ, ಮಾದಿಗ ಯಾರು ಎಂಬುದನ್ನು ತಮ್ಮದೊಂದು ವಚನದ ಮೂಲಕ ಹೀಗೆ ತಿಳಿಸಿದರು.

*'ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ*
*ಹೊಲೆಯ*
*ಕುಲವೇನೋ ಆವಂದಿರ ಕುಲವೇನೋ?*
*ಸಕಲ ಜೀವಾತ್ಮರಿಗೆ ಲೇಸನೆ ಬಯಸುವ*
*ನಮ್ಮ ಕೂಡಲಸಂಗನ ಶರಣನೇ ಕುಲಜನು'*

ದಯವೇ ಧರ್ಮದ ಮೂಲವೆಂದು ಸಾರಿದ ಬಸವಣ್ಣನವರು ಈ ಭೂಮಿಯ ಮೇಲೆ ಬದುಕುವ ಹಕ್ಕು ಪ್ರತಿಯೊಂದು ಪ್ರಾಣಿಗೂ ಇದೆ. ಆದರೆ ಈ ಭೂಮಿಯ ಮೇಲೆ ಮಾನವನು ನಿರ್ದಯವಾಗಿ ಮೂಕ ಪ್ರಾಣಿಗಳನ್ನು ಕೊಲ್ಲುತ್ತಿದ್ದಾನೆ. ಪ್ರಾಣಿಗಳ ಮಾಂಸವನ್ನು ತಿನ್ನುತ್ತಿದ್ದಾನೆ. ಮೂಕ ಪ್ರಾಣಿಗಳನ್ನು ಕರುಣೆಯಿಲ್ಲದೆ ಕೊಲ್ಲುವವನೇ ಮಾದಿಗ. ಪ್ರಾಣಿಹಿಂಸೆಯಿಂದ ಬಂದ ಮಾಂಸವನ್ನು ಸೇವಿಸುವವನೇ ಹೊಲೆಯನೆಂದು ಹೇಳಿದರು. ನಿಜವಾದ ಹೊಲೆಯ ಮಾದಿಗನ ಸ್ಥಿತಿಯನ್ನು ತಮ್ಮ ಈ ವಚನದ ಮೂಲಕ ನಿಚ್ಚಳವಾಗಿ ನಿರೂಪಿಸಿದರು. ಎಲ್ಲ ಪಶುಪಕ್ಷಿಗಳನ್ನು ದಯಾಂತಃಕರುಣೆಯಿಂದ ಕಂಡು ತನ್ನಂತೆ ಪರರು ಎಂಬ ಮಾನವತೆಯ ಗುಣಗಳನ್ನು ಅಳವಡಿಸಿಕೊಂಡವನೇ ಶ್ರೇಷ್ಠ ಕುಲದವನು ಎಂಬುದನ್ನು ಮನವರಿಕೆ ಮಾಡಿಕೊಟ್ಟರು.

ಬಸವಣ್ಣನವರು ಸಮಾಜದಲ್ಲಿ ಎರಡೇ ಕುಲಗಳಿವೆ. ಒಂದು ಭವಿಕುಲ, ಇನ್ನೊಂದು ಭಕ್ತಕುಲ ಎಂದು ಹೇಳಿದರು. ಪ್ರಾಣಿ ಹಿಂಸೆ ಮಾಡುತ್ತಾ, ಮದ್ಯ ಮಾಂಸಾದಿ





ಗಳನ್ನು ಸೇವಿಸುತ್ತಾ ಗುರು ಹಿರಿಯರಲ್ಲಿ ಗೌರವ ತೋರಿಸದೆ ಸ್ವೇಚ್ಛೆಯಾಗಿ ಜೀವಿಸುವವ ಭವಿಯೆಂದೂ; ದೇವರನ್ನು ನಂಬಿ, ಸರ್ವ ಮನುಷ್ಯರನ್ನು ತನ್ನಂತೆ ಸರಿಸಮಾನತೆಯಿಂದ ಕಂಡು ತನ್ನ ಅರಿವಿನ ಕುರುಹಾದ ಲಿಂಗವನ್ನು ಪೂಜಿಸುತ್ತಾ ಸತ್ಯ ಶುದ್ಧ ಕಾಯಕ ಮಾಡುತ್ತಾ ಬಾಳುವವ ಭಕ್ತನೆಂದು ಹೇಳಿದರು. ಇಂತಹ ಭಕ್ತ ತನ್ನ ಅಂತರಂಗದ ಸಾಧನೆಯಿಂದ ಹಾಗೂ ಅನುಭಾವದ ಸಂಸ್ಕಾರದಿಂದ ಶರಣನಾಗಲು ಬರುತ್ತದೆಯೆಂದು ಅಣ್ಣನವರು ಜನರಿಗೆ ತಿಳಿಸಿಕೊಟ್ಟರು. ಇಂತಹ ಭಕ್ತರ ಕುಲವನ್ನು ಈ ವಚನದಲ್ಲಿ ತುಂಬಾ ಪರಿಣಾಮಕಾರಿಯಾಗಿ ಹೇಳಿದ್ದಾರೆ.

*'ದೇವ ಸಹಿತ ಭಕ್ತ ಮನೆಗೆ ಬಂದರೆ,*
*ಕಾಯಕವಾವುದೆಂದು ಬೆಸಗೊಂಡರೆ ನಿಮ್ಮಾಣೆ !*
*ನಿಮ್ಮ ಪುರಾತರಾಣೆ, ತಲೆದಂಡ, ತಲೆದಂಡ*
*ಕೂಡಲಸಂಗಮದೇವಾ ; ಭಕ್ತರ ಕುಲವನರಸಿದರೆ*
*ನಿಮ್ಮ ರಾಣಿವಾಸದಾಣೆ ;'*

ಮನುಷ್ಯ ಯಾವ ಜಾತಿಯಲ್ಲಿಯೇ ಹುಟ್ಟಲಿ ಅವನು ಸದಾಚಾರಿಯಾಗಿ, ಕಾಯಕನಿಷ್ಠನಾಗಿ ಸರ್ವರ ಹಿತ ಬಯಸಿದರೆ ಅವನೇ ಭಕ್ತನೆನಿಸಿಕೊಳ್ಳುತ್ತಾನೆ. ಈ ಭಕ್ತ ತನ್ನ ಅಂತರಂಗದ ಸಾಧನೆಯಿಂದ ಶರಣನಾಗಲು ಬರುತ್ತದೆ. ಹಾಲು ಸಂಸ್ಕಾರದಿಂದ ಮೊಸರು ಬೆಣ್ಣೆ ನಂತರ ತುಪ್ಪವಾಗುವಂತೆ ಭಕ್ತನಾದವನು ಗುರುವಿನ ಕರುಣೆಯಿಂದ ಹಾಗೂ ಲಿಂಗದ ನಿರೀಕ್ಷಣೆಯಿಂದ ಶರಣನಾಗಲು ಸಾಧ್ಯ. ಲಿಂಗವಂತನೆನಿಸಿಕೊಳ್ಳಲು ಹಾಗೂ ಜಂಗಮ ಸಂಸ್ಕಾರ (ದೀಕ್ಷೆ)ದಿಂದ ಜಂಗಮನಾಗಲು ಬರುತ್ತದೆ. ಇಂತಹ ಶರಣನ ಮೊದಲಿನ ಕುಲವನ್ನು ಎಣಿಸುವುದರಿಂದ ಪಾಪ ಸಂಭವಿಸುತ್ತದೆ. ಬಸವಣ್ಣನವರ ಈ ವಚನ ಮೇಲಿನ ವಚನದ ಸಾರಕ್ಕೆ ಪುಷ್ಟಿಯನ್ನೀಯುತ್ತದೆ.

*'ಎಂತಹನಾದರೇನು ? ಲಿಂಗ ಮುಟ್ಟದವನೇ ಕೀಳು*
*ಜಾತಿ ಕುಲವದು ತಪ್ಪುದು ಲಿಂಗಮುಟ್ಟಲೊಡನೆ*
*ಹೊನ್ನಹುದು ತಪ್ಪುದು ಪರುಷ ಮುಟ್ಟಲೊಡನೆ*
*ಕೂಡಲಸಂಗಮದೇವನೊಲ್ಲ ಸರ್ವಸಂದೇಹಿಗಳ'*

ಯಾರೇ ಆಗಲಿ ತಮ್ಮ ಅಂತರಂಗದಲ್ಲಿ ಅಡಕವಾದ ಅರಿವಿನ ಕುರುಹಾದ ಲಿಂಗವನ್ನು ಪೂಜಿಸದವರು ಅಥವಾ ಭವಿಯಾದವರು ಕೀಳುಜಾತಿಯವರೆಂದೆನಿಸಿಕೊಳ್ಳುತ್ತಾರೆ. ಭಕ್ತನಾದವನಿಗೆ ಕುಲದ ಕಳಂಕ ಕಳೆದು ಹೋಗುತ್ತದೆ. ಕಬ್ಬಿಣ ಒಂದು ಕಠಿಣತರವಾದ ಕಡಿಮೆ ಬೆಲೆಯ ಲೋಹವಾಗಿದೆ. ಈ ಲೋಹಕ್ಕೆ ಪರುಷಮಣಿ ಸೋಂಕಿದ ಕೂಡಲೇ ಅದು ಬಂಗಾರವಾಗುತ್ತದೆ. ಈ ಬಂಗಾರಕ್ಕೆ ಬಹಳ ಬೆಲೆ ಬರುತ್ತದೆ. ಇದೇ ರೀತಿ ಭಕ್ತನಾದವನು ಲಿಂಗದೀಕ್ಷೆ ಪಡೆದುಕೊಂಡು ಸಾಧನೆ ಮಾಡಿದರೆ ಶರಣನಾಗುತ್ತಾನೆ. ಈ ಕ್ರಮ ಪ್ರಕೃತಿಯಲ್ಲಿಯೂ ನಡೆಯುತ್ತದೆ. ಭ್ರಮರ(ದುಂಬಿ) ಹಸಿರು ಕೀಟವನ್ನು ತಂದು ಅದಕ್ಕೆ ತನ್ನತನದ ಸಂಸ್ಕಾರ ಕೊಡುತ್ತದೆ. ಆಗ ಹಸಿರು ಕೀಟ ತನ್ನ ಆಕಾರ ಬದಲಾಯಿಸಿಕೊಂಡು ಕಪ್ಪುಬಣ್ಣ ಹಾಗೂ ರೆಕ್ಕೆ ಹೊಂದಿ ಭ್ರಮರವಾಗಿ ಹೂವಿನಿಂದ ಹೂವಿಗೆ ಹಾರಿ ಮಕರಂದ ಹೀರಲು ಪ್ರಾರಂಭಿಸುತ್ತದೆ. ಇದಕ್ಕೆ ಭ್ರಮರ ಕೀಟನ್ಯಾಯವೆಂದು ಕರೆಯುತ್ತಾರೆ.

ಈ ತತ್ವದಂತೆ ಭಕ್ತನಾದವನು ಸಂಸ್ಕಾರ ಮತ್ತು ಸಾಧನೆಯಿಂದ ಜಂಗಮ ಹಾಗೂ ಶರಣನಾಗಲು ಬರುತ್ತದೆ ಎಂದು ಬಸವಣ್ಣನವರು ತಮ್ಮ ಕಾರ್ಯಕ್ಷೇತ್ರವಾದ ಕಲ್ಯಾಣದಲ್ಲಿ ಸಾಧಿಸಿ ತೋರಿಸಿದರು. ಕಡಿಮೆ ಕುಲದಲ್ಲಿ ಜನಿಸಿದ ಮದ್ದಳೆ ಬಾರಿಸುವ ಅಲ್ಲಮಪ್ರಭುವಿನ ಅಂತರಂಗದ ಜ್ಞಾನ ಪ್ರಕಾಶಕ್ಕೆ ಮೆಚ್ಚಿ ಅವರನ್ನು ಅನುಭವ ಮಂಟಪದ ಅಧ್ಯಕ್ಷರನ್ನಾಗಿ ಮಾಡಿದರು. ಇದರಂತೆ ಉರಿಲಿಂಗಪೆದ್ದಿ, ಹರಳಯ್ಯ, ಚೌಡಯ್ಯ, ಅಪ್ಪಣ್ಣ ಮುಂತಾದವರು ತಮ್ಮ ಜಾತಿಯನ್ನು ಕಳೆದುಕೊಂಡು ಶರಣರಾದರು. ಅಲ್ಲಮಪ್ರಭು ನಿರಂಜನ ಪೀಠದ ಜಂಗಮನಾಗಿ, ಶೂನ್ಯಪೀಠದ ಅಧ್ಯಕ್ಷನಾಗಿ ಸಕಲ ಶರಣ ಶರಣೆಯರಿಗೆ, ವಚನಕಾರ, ವಚನಕಾರ್ತಿಯರಿಗೆ ಮಾರ್ಗದರ್ಶಕರಾದರು. ಇಂತಹವರ ಪೂರ್ವಾಶ್ರಯದ ಕುಲವನ್ನು ಎಣಿಸುವ ಸಂದೇಹಿಗಳಿಗೆ ದೇವರು ಎಂದಿಗೂ ಒಲಿಯುವುದಿಲ್ಲ. ಸಂಶಯದ ಸುಳಿಯಲ್ಲಿ ಸಿಲುಕಿದ ಮನುಜರು ಸದಾ ಜೀವನದಲ್ಲಿ ನಾನಾ ತರಹದ ಸಂಕಟ ಪಡುತ್ತಿರುತ್ತಾರೆ. ಶರಣರ ಪೂರ್ವದ ಕುಲವನ್ನು ಎಣಿಸುವುದುಅ ಉಚಿತವಲ್ಲ. ಹಾಲು ಸಂಸ್ಕಾರದಿಂದ ತುಪ್ಪವಾದ ಮೇಲೆ ಅದು ಎಂದಿಗೂ ಮೊದಲಿನಂತೆ ಹಾಲಿನ ರೂಪ ಪಡೆಯುವುದಿಲ್ಲ. ಇದೇ ರೀತಿ ಭಕ್ತನು ಭಕ್ತಸ್ಥಲದಿಂದ ಸಾಧನೆ ಮೂಲಕ ಮೇಲೇರಿ ಮಹೇಶ, ಪ್ರಸಾದಿ, ಪ್ರಾಣಲಿಂಗಿಯಾಗಿ ಕೊನೆಗೆ ಶರಣನಾಗುತ್ತಾನೆ. ಶರಣನಾದವನಿಗೆ ಕುಲದ ಕಟ್ಟಳೆ ತಟ್ಟಲಾರದು. ಬಸವಣ್ಣನವರು ತಾವು ಜನ್ಮತಃ ಶೈವ ಬ್ರಾಹ್ಮಣರಾದರೂ ಸಹ ತಾನು ಭಕ್ತನಾಗಲು ಅರ್ಹನಾಗಿಲ್ಲವೆಂದು ಮೆರೆದಿದ್ದಾರೆ.

ಅವರು ಉತ್ತಮ ಕುಲದಲ್ಲಿ ಹುಟ್ಟಿದವನೆಂಬ ಕಷ್ಟತನದ ಹೊರೆಯನ್ನು ಹೊರಿಸದಿರಯ್ಯ ಎಂದು ದೇವರಲ್ಲಿ ಬೇಡಿಕೊಂಡರು. ಅವರು ಎಲ್ಲ ಮಾನವರು ಒಂದೇ ಎಂದು ತಿಳಿದು ಬಾಳಿದ ಮಾನವತಾವಾದಿಗಳು ಅವರು ಹನ್ನೆರಡನೆಯ ಶತಮಾನದಲ್ಲಿ ಮಾಡಿದ ಸಾಮಾಜಿಕ ಕ್ರಾಂತಿ ಮನುಕುಲದ ಇತಿಹಾಸದಲ್ಲಿಯೇ ಹೊಸತಾದುದು. ಅವರ ಈ ವಚನ ಅಣ್ಣನವರ ಮಹೋನ್ನತ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

*ಇವನಾರವ, ಇವನಾರವ, ಇವನಾರವ ಎಂದೆನಿಸದಿರಯ್ಯಾ*
*ಇವನಮ್ಮವ, ಇವನಮ್ಮವ, ಇವನಮ್ಮವ ಎಂದೆನಿಸಯ್ಯಾ*
*ಕೂಡಲಸಂಗಮದೇವಾ; ನಿಮ್ಮ ಮನೆಯ*
*ಮಗನೆಂದೆನಿಸಯ್ಯಾ ॥*

ವಿಶ್ವಮಾನವ ಧರ್ಮ ಬೋಧಿಸಿದ ಬಸವಣ್ಣನವರ ತತ್ವ ಸಂದೇಶ ಈ ಇಪ್ಪತ್ತೊಂದನೆಯ ಶತಮಾನಕ್ಕೂ ಪ್ರಸ್ತುತವೆನಿಸಿದೆ. ತಮ್ಮ ಸಾವಿರಾರು ವಚನಗಳ ಮೂಲಕ ಸಾರ್ವಕಾಲಿಕ ಸತ್ಯ ಜೀವನ ಮೌಲ್ಯಗಳನ್ನು ತಿಳಿಸಿದ ಬಸವಣ್ಣನವರು ಕನ್ನಡನಾಡು ಕಂಡ ಅನರ್ಘ್ಯ ರತ್ನವಾಗಿದ್ದಾರೆ. ಅವರು ಯುಗಕ್ಕೊಮ್ಮೆ ಹುಟ್ಟುವ ಮಹಾತ್ಮರಾಗಿದ್ದಾರೆ. ಬಸವಣ್ಣನವರ ಬಾಳಿಸ ಸಂದೇಶ ಮಾನವ ಜನಾಂಗಕ್ಕೆ ಮಾರ್ಗದರ್ಶಕ ಸುವರ್ಣ ಸೂತ್ರವಾಗಿದೆ.

*

## ಸೋಮೇಶ್ವರ ಶತಕ

ರವಿಯಾಕಾಶಕೆ ಭೂಷಣಂ ರಜನಿಗಾ ಚಂದ್ರಂ
ಮಹಾ ಭೂಷಣಂ ।
ಕುವರಂ ವಂಶಕೆ ಭೂಷಣಂ ಸರಸಿಗಂಭೋಜಾತಗಳ್
ಭೂಷಣಂ ॥
ಹವಿ ಯಜ್ಞಾಳಿಗೆ ಭೂಷಣಂ ಸತಿಗೆ ಪಾತಿವ್ರತ್ಯವೇ
ಭೂಷಣಂ ।
ಕವಿಯಾಸ್ಥಾನಕೆ ಭೂಷಣಂ ಹರಹರಾ
ಶ್ರೀ ಚೆನ್ನಸೋಮೇಶ್ವರಾ ॥

ಆಕಾಶಕ್ಕೆ ಸೂರ್ಯನೂ, ರಾತ್ರಿಗೆ ಚಂದ್ರನೂ, ವಂಶಕ್ಕೆ ಮಗನೂ, ಸರೋವರಕೆ ಕಮಲವೂ, ಯಜ್ಞಕ್ಕೆ ಹೋಮ ಮಾಡುವ ಪದಾರ್ಥವೂ, ಹೆಂಗಸಿಗೆ ಪಾತಿವ್ರತ್ಯವೂ, ರಾಜಸಭೆಗೆ ಕವಿಯೂ ಅಲಂಕಾರವು.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

'ಸಿದ್ಧಗಂಗಾ' ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಅರಿತು ಆಜೀವ ಸದಸ್ಯರು ಮುಂದಾಗಿ ಹೆಚ್ಚುವರಿ ಚಂದಾ ರೂ.500 ರೂ.400 ಉದಾರತೆಯಿಂದ ಸಂದಾಯ ಮಾಡುತ್ತಿದ್ದಾರೆ. ಅವರಿಗೆ ಶ್ರೀಮಠದ ಪರವಾಗಿ ಧನ್ಯವಾದಗಳು.

ಸಂದಾಯ ಮಾಡದೆ ಇರುವವರಲ್ಲಿ ನಮ್ರ ವಿನಂತಿ ಪ್ರಸ್ತುತವಿರುವ ಆಜೀವ ಚಂದಾ 1000/– ರೂ.ಗೆ ಸರಿಹೊಂದುವಂತೆ ಉಳಿಕೆ 500/–ರೂ. 400/– ರೂ. ಶೀಘ್ರವಾಗಿ ಸಂದಾಯ ಮಾಡಿ 'ಸಿದ್ಧಗಂಗಾ' ಆತಂಕವಿಲ್ಲದೆ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ಕೋರುತ್ತೇವೆ.

ತಮ್ಮ ವಿಳಾಸದಲ್ಲಿರುವ ಎಲ್‌ಎಮ್ ನಂಬರ್ ಸೂಚಿಸಿ ಬಾಕಿ ಆಜೀವ ಚಂದಾವನ್ನು ನಗದು/ಎಂ.ಒ./ಚೆಕ್/ಡಿ.ಡಿ. ಮೂಲಕ 'ಸಿದ್ಧಗಂಗಾ' ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ದಯಮಾಡಿ ಕಳುಹಿಸಿ ಎಂದು ವಿನಂತಿಸಿಕೊಳ್ಳುತ್ತೇನೆ.

ಪ್ರಕಾಶಕರು
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು– 572 104.

## ಶ್ರೀವಾಣಿ

ಕಾಯಕದಲ್ಲಿ ಮೇಲು–ಕೀಳು ಎಂಬ ಭೇದ ಭಾವ ಇರಲಾರದು. ಕಾಯಕ ಜೀವನ ದೇವರ ಪೂಜೆಯಷ್ಟೇ ಪವಿತ್ರ. ಅನ್ಯರ ಸಂಪತ್ತು ಕಸಕ್ಕೆ ಸಮಾನ ಎಂಬ ಶರಣರ ದೃಷ್ಟಿ ಬೇಕು. ಬಸವಣ್ಣನವರ ಕಾಯಕ ತತ್ವಾಚರಣೆಯಿಂದ ಕಲ್ಯಾಣ ರಾಜ್ಯ ನಿರ್ಮಾಣವಾಗಿತ್ತು. ಅದು ಮತ್ತೆ ಬರಬೇಕು.





# ದೇಹಾಲಯ ಸಂಸ್ಕೃತಿ

–ಆರ್.ಎಂ. ಕರಡಿಗುದ್ದಿ, 'ಬಸವದೀಪ' ನಿವಾಸ, ಪ್ಲಾಟ್ ನಂ. 8, ಹುಳಬತ್ತಿ ಕಾಲನಿ, ಶಹಾಪುರ, ಬೆಳಗಾವಿ–59003

ಪ್ರಪಂಚದ ನಾಗರೀಕತೆಗಳಲ್ಲಿ ಭಾರತಕ್ಕೆ ಒಂದು ವಿಶಿಷ್ಟವಾದ ಸ್ಥಾನವಿದೆ. ವಿವಿಧತೆಯಲ್ಲಿ ಏಕತೆಯನ್ನು ನಾವಿಲ್ಲಿ ಕಾಣುತ್ತೇವೆ. ಹಲವಾರು ಜನಾಂಗಗಳು ಬಂದು ಇಲ್ಲಿಯ ಸಂಸ್ಕೃತಿಯಲ್ಲಿ ಸಮರಸವಾದುವು. ಹಲವಾರು ಭಾಷೆಗಳು, ಉಡುಪುಗಳು, ರೀತಿ ನೀತಿಗಳು, ಸಂಪ್ರದಾಯಗಳು, ಪರಂಪರೆಗಳು, ಮತಪಂಥಗಳು, ಧರ್ಮಗಳು ಇಲ್ಲಿ ಪ್ರೀತಿವಿಶ್ವಾಸದಿಂದ, ಸೌಹಾರ್ದದಿಂದ ಬಾಳುತ್ತಿವೆ. ಇದೇ ಭಾರತೀಯ ಸಂಸ್ಕೃತಿ.

ಇಲ್ಲಿಯ ಪ್ರಮುಖವಾದ ಧರ್ಮವೆಂದರೆ ವೈದಿಕ ದರ್ಮ. (ಕೆಲವರು ಅದಕ್ಕೆ ಹಿಂದೂ ಧರ್ಮ ಎನ್ನುತ್ತಿದ್ದರೂ ಅದು ಒಂದು ಧರ್ಮವಲ್ಲ ಜೈನ, ಬೌದ್ಧ, ಸಿಖ್ಖ, ವೈದಿಕ, ಲಿಂಗಾಯತ ಮುಂತಾದ ಧರ್ಮಗಳ ಒಕ್ಕೂಟ ಎಂದರೆ ಹಿಂದೂ, ವೇದಗಳನ್ನು ಪ್ರಮಾಣವೆಂದು ಭಾವಿಸುವುದೇ ವೈದಿಕ ಧರ್ಮ) ವೇದಕಾಲದಲ್ಲಿ ಮತ್ತು ಉಪನಿಷತ್ಕಾಲದಲ್ಲಿ ಇಲ್ಲಿಯ ಸಮಾಜದ ಸ್ಥಿತಿ ಚೆನ್ನಾಗಿತ್ತು. ಆದರೆ ಮನು ಕಾಲದಿಂದ ಸಮಾಜದಲ್ಲಿ ಏರುಪೇರುಗಳುಂಟಾದುವು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕು ಆಶ್ರಮಗಳು ಸಮಾಜದಲ್ಲಿ ಭೇದಗಳನ್ನುಂಟುಮಾಡಿದುವು. ಬ್ರಾಹ್ಮಣರಿಗೆ ಅತ್ಯಧಿಕ ಸೌಲಭ್ಯಗಳು ಶೂದ್ರರಿಗೆ ಕನಿಷ್ಠ ಸೌಕರ್ಯಗಳು, ಸಂನ್ಯಾಸಿ ಶ್ರೇಷ್ಠ, ಗೃಹಸ್ಥ ಕನಿಷ್ಠ ಮುಂತಾದ ಭಾವನೆಗಲು ತಲೆಯೆತ್ತಿದುವು. ಸ್ತ್ರೀಯರು ಶೂದ್ರರು, ಅವರಿಗೆ ವೇದಾಧ್ಯಯನದ ಧಾರ್ಮಿಕ ವಿಧಿಗಳಲ್ಲಿ ಭಾಗವಹಿಸುವ ಅಧಿಕಾರವಿಲ್ಲ ಎಂಬ ನಿರ್ಬಂಧ ಹೇರಲಾಯಿತು. ಶೂದ್ರರಿಂದಲೂ ಕೀಳು ಎಂದು ಪರಿಗಣಿಸಲ್ಪಟ್ಟಿದ್ದ ಪಂಚಮರ ಸ್ಥಿತಿಯಂತೂ ಹೇಳತೀರದು. ಪ್ರಾಣಿಗಳಿಗಿಂತಲೂ ಕಡೆಯಾಗಿ ಅವರನ್ನು ನಡೆಸಿಕೊಳ್ಳಲಾಗುತ್ತಿತ್ತು. ಉಳ್ಳವರಿಗೆ ಮಣೆ, ಇನ್ನುಳಿದವರಿಗೆ ಕಾಲುಕಸದ ಬೆಲೆ, ಬೌದ್ಧಿಕ ಕೆಲಸದವರು ಉತ್ತಮರು, ದೈಹಿಕ ಶ್ರಮಜೀವಿಗಳು ಅಧಮರು ಹೀಗೆ ಹಲವು ರೀತಿಯ ಭೇದಗಳು ಸಮಾಜವನ್ನು ಒಡೆದು ಚೂರು ಚೂರು ಮಾಡಿದ್ದುವು.

**ದೇವಾಲಯ ಸಂಸ್ಕೃತಿ :** ಉಪನಿಷತ್ಕಾಲದ ನಂತರ ಭಾರತದಲ್ಲಿ ಪುರಾಣಕಾಲ ಪ್ರಾರಂಭವಾಗಿ ನೂರಾರು ದೇವತೆಗಳು ಹುಟ್ಟಿಕೊಂಡವು. ಶಿವ, ವಿಷ್ಣು, ಬ್ರಹ್ಮ ಈ ಮುಖ್ಯ ದೇವತೆಗಳಿಂದ ಹಲವಾರು ಉಪದೇವತೆಗಳು ಉದಯಿಸಿದುವು. ಬಹುದೇವೋಪಾಸನೆ ಪ್ರಾರಂಭವಾಯಿತು. ಕ್ರಮೇಣ ಆ ದೇವತೆಗಳಿಗಾಗಿ ಮಂದಿರಗಳು ನಿರ್ಮಾಣವಾಗಹತ್ತಿದುವು. ಮಂದಿರಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳು ಬೋಧನೆಗಳು, ನೀತಿ–ನಿಯಮಗಳು ಪ್ರಾರಂಭವಾದುವು. ಎಲ್ಲ ಸಮೂಹ ಕಾರ್ಯಕ್ರಮಗಳು ಅಲ್ಲಿ ಜರುಗಲಾರಂಭಿಸಿದುವು. ಜಾನಪದ ಕಲೆಗಳಿಗೆ ಪ್ರೋತ್ಸಾಹ ದೊರೆಯಿತು. ರಾಜಮಹಾರಾಜರು ಕಲಾಕಾರರಿಗೆ ಬಹುಮಾನಗಳನ್ನು ಕೊಡುತ್ತಿದ್ದರು. ಶಿಲ್ಪಕಲೆ, ವರ್ಣಕಲೆ, ನೃತ್ಯ, ಸಂಗೀತ, ನಾಟಕ ಮುಂತಾದ ಕಲೆಗಳು ಸಮೃದ್ಧವಾಗಿ ಬೆಳೆದುವು. ಕೆಲವು ಶತಮಾನಗಳು ಉರುಳಿದುವು. ಆದರೆ ಈ ಪರಿಸ್ಥಿತಿ ಹಾಗೇ ಉಳಿಯಲಿಲ್ಲ. ದೇವಾಲಯ ಸಂಸ್ಕೃತಿಯ ಉತ್ತಮಾಂಗವು ಕ್ರಮೇಣ ದಾರಿ ತಪ್ಪಿ ನಡೆಯಲಾರಂಭಿಸಿ ಕಂದಕಕ್ಕೆ ಬೀಳುವ ಸ್ಥಿತಿಯುಂಟಾಯಿತು.

ದೇವಾಲಯದ ಪುರೋಹಿತವರ್ಗ ಮತ್ತು ಸಮಾಜದ ಸಿರಿವಂತವರ್ಗ ಸೇರಿಕೊಂಡು ಸಮಾಜದ ಶೋಷಣೆಯನ್ನು ಆರಂಭಿಸಿದುವು. ಪುರೋಹಿತವರ್ಗ ತನ್ನ ಸ್ವಾರ್ಥಕ್ಕಾಗಿ ಬಗೆಬಗೆಯ ಪೂಜೆ, ಅರ್ಚನೆ, ವ್ರತನಿಯಮ, ಸಂಕಲ್ಪವಿಕಲ್ಪ, ಭಯಸಂದೇಹ, ಜ್ಯೋತಿಷ್ಯ, ಶಕುನ–ಅಪಶಕುನ ಮುಂತಾದ ಹಲವಾರು ಮಾರ್ಗಗಳಿಂದ ಮೂಢ ಜನರನ್ನು ಹಿಂಡಲಾರಂಭಿಸಿತು. ಸಿರಿವಂತರು ಪುರೋಹಿತರೊಡನೆ ಕೈಜೋಡಿಸಿ ಕಾಮಸೂತ್ರದ ಶಿಲ್ಪ, ಹೆಣ್ಣು ದೇವತೆಗಳ ನಗ್ನಚಿತ್ರ, ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ಶೃಂಗಾರ ನಾಟಕಗಳು ಮುಂತಾದ ವಿಕೃತ ಪದ್ಧತಿಗಳನ್ನು ದೇವಾಲಯಗಳಲ್ಲಿ ಆರಂಭಿಸಿದರು. ಪುರೋಹಿತರು ಬಡ ಜನರ ದುಡಿಮೆಯ ಮೇಲೆ ಬದುಕುವ ಪರಪುಷ್ಟಜೀವಿಗಳಾದರು. ಅವರು ತುಪ್ಪವನ್ನುಂಡು ಭೋಗವಿಲಾಸಿಗಳಾದರೆ ಅಜ್ಞ ಬಡ ಜನರು ಉಪ್ಪಿಗೂ ಗತಿಯಿಲ್ಲದೆ ಅಧೋಗತಿಗಿಳಿದರು. ಸಿರಿವಂತರೂ ಭೋಗ ವಿಲಾಸಕ್ಕಾಗಿ ದೀನದಲಿತರ ದುರ್ಬಳಕೆ ಮಾಡಿಕೊಂಡು ಸುಖದ ಸುಪ್ಪತ್ತಿಗೆಯಲ್ಲಿ ಉರುಳಾಡಹತ್ತಿದರು.

ಒಂದು ಕಡೆಗೆ ಮನುಪ್ರಣೀತ ಸಮಾಜ ವ್ಯವಸ್ಥೆಯಿಂದ ಸಮಾಜವು ಒಡಕು ಗಡಿಗೆಯಾದರೆ ದೇವಾಲಯ ಸಂಸ್ಕೃತಿಯ ವಿಕೃತಸ್ವರೂಪದಿಂದ ಕೆಳಸ್ತರದ ಜನರ ನಿತ್ಯ

ಶೋಷಣೆಯಾಗುತ್ತಿತ್ತು. ಮತ್ತೊಂದು ಕಡೆಗೆ ರಾಜರಾಜರಲ್ಲಿಯ ಒಳಜಗಳದಿಂದ ರಾಜಕೀಯವಾಗಿಯೂ ಭಾರತದ ಜನತೆ ಹರಿದು ಹಂಚಿ ಹೋಯಿತು. ಹೀಗಾಗಿ ಎಲ್ಲೆಡೆ ಅನೈಕ್ಯತೆ, ಅಸಮಾನತೆ ತಾಂಡವವಾಡುತ್ತಿತ್ತು. ಇಂಥ ಭಯಾನಕ ಸ್ಥಿತಿಯನ್ನು ನಿವಾರಿಸಲು ಹಲವಾರು ಮಹಾತ್ಮರು ಮತ್ತು ರಾಜರು ತಮ್ಮ ಕೈಲಾದಮಟ್ಟಿಗೆ ಪ್ರಯತ್ನಿಸಿದರು. ಭಗವಾನ್ ಮಹಾವೀರ ಮತ್ತು ಗೌತಮ ಬುದ್ಧ ಸ್ವಲ್ಪಮಟ್ಟಿಗೆ ಸಮಾಜ ವ್ಯವಸ್ಥೆಯನ್ನು ಬದಲಾಯಿಸಲು ಹೆಣಗಾಡಿದರು. ಕರ್ಮಕಾಂಡದ ತೀವ್ರತೆಯನ್ನು ಸ್ವಲ್ಪ ಶಮನಗೊಳಿಸಿದರು. ಆದರೆ ಅವರ ಅನುಯಾಯಿಗಳು ಆನಂತರದ ಕಾಲದಲ್ಲಿ ಮತ್ತೆ ಅದಕ್ಕೆ ಜೋತುಬಿದ್ದರು. ಶಂಕರಾಚಾರ್ಯರು ಅದ್ವೈತ ತತ್ವಶಾಸ್ತ್ರವನ್ನು ಬೋಧಿಸಿದರು. ಆದರೆ ಸಮಾಜವನ್ನು ತಿದ್ದುವ ಗೊಡವೆಗೆ ಹೋಗಲಿಲ್ಲ. ರಾಮಾನುಜಾಚಾರ್ಯರು ಸಮಾಜಮುಖಿ ಯಾಗಿ ಕೆಲವು ವಿಚಾರಗಳನ್ನು ಹೇಳಿದಾಗ ತಮಿಳುನಾಡಿ ನಿಂದ ಅವರನ್ನು ಓಡಿಸಲಾಯಿತು. ಅವರು ಕರ್ನಾಟಕಕ್ಕೆ ಬಂದು ತಮ್ಮ ವಿಶಿಷ್ಟಾದ್ವೈತವನ್ನು ಪ್ರಚುರಪಡಿಸಿದರು. ಅಲ್ಲಲ್ಲಿಗೆ ಇಂಥ ಸುಧಾರವಣೆಯ ಗಾಳಿ ಬೀಸುತ್ತಿತ್ತು. ಆದರೆ ಪಟ್ಟಭದ್ರ ಹಿತಾಸಕ್ತಿಯ ಬಿರುಗಾಳಿಯ ಮುಂದೆ ಅದು ತಣ್ಣಗಾಗುತ್ತಿತ್ತು.

ಸಾಮಾನ್ಯ ಜನರು ಅಜ್ಞಾನ, ಅನಕ್ಷರತೆ, ಮೂಢ ನಂಬಿಕೆ, ವಿಚಾರಶೂನ್ಯತೆ, ಧರ್ಮದ ಭಯ ಮುಂತಾದುವು ಗಳಿಂದ ನಲುಗಿ ಹೋಗಿದ್ದರು. ಅವರಿಗೆ ನಿತ್ಯದ ಬದುಕೇ ಕಷ್ಟದ ಹೊರೆಯಾಗಿತ್ತು. ಇನ್ನು ಒಳಿತು-ಕೆಡಕು, ಸತ್ಯ-ಅಸತ್ಯ, ನ್ಯಾಯ-ಅನ್ಯಾಯ ಇವುಗಳ ಸರಿಯಾದ ಕಲ್ಪನೆ ಅವರಿಗೆ ಹೇಗೆ ಬರಬೇಕು? ತಮ್ಮ ಕಷ್ಟಕೋಟಲೆಗೆ ಹಣೆಬರಹವೇ ಕಾರಣವೆಂದು ನಂಬಿ ಮೌನವಾಗಿ ಸಹಿಸಿಕೊಂಡು ಹೋಗುತ್ತಿದ್ದರು. ಯಾರೂ ಅವರ ಕಡೆಗೆ ಗಮನ ಕೊಡುವವರಿಲ್ಲ. ಇಂಥ ದೀನಸ್ಥಿತಿಯಲ್ಲಿ ಬಸವ ಭಾನುವಿನ ಉದಯವಾಯಿತು. ಅವರ ಉದಯದ ಜೊತೆಗೇ ಡೋಹರಕೇತನೆಂಬ ಯುವಕನ ಶಿಕ್ಷೆ ರದ್ದಾಯಿತು. ಆ ಪ್ರಖರವಾದ ಬೆಳಕಿನಲ್ಲಿ ಅಜ್ಞಾನದ ಶೃಂಖಲೆ ಕಳಚಿತು; ಶೋಷಣೆಗೆ ತಡೆಯುಂಟಾಯಿತು; ವಿಷಮತೆಯ ದುರ್ನಾತ ಬಯಲಾಯಿತು; ಶ್ರೀಸಾಮಾನ್ಯರು ಮುಕ್ತವಾದ ಗಾಳಿಯಲ್ಲಿ ಉಸಿರಾಡಲಾರಂಭಿಸಿದರು. ಅವರಲ್ಲಿ ವಿವೇಕದ ಜ್ಯೋತಿ ಬೆಳಗಿತು; ಒಳಿತು ಕೆಡಕಿನ ಅರಿವು ಮೂಡಿತು.

ಬಸವಣ್ಣನವರು ತೀಕ್ಷ್ಣ ಬುದ್ಧಿಯವರು, ಕರುಣಾ ಮೂರ್ತಿಗಳು ಹಾಗೂ ಶ್ರೀಸಾಮಾನ್ಯರ ಹಿತವನ್ನೇ ತಮ್ಮ ಬದುಕಿನ ಗುರಿ ಮಾಡಿಕೊಂಡವರಾಗಿದ್ದರು. ಅವರು ಸೂಕ್ಷ್ಮ ನಿರೀಕ್ಷಣೆಯಿಂದ ಸಮಾಜದ ಓರೆಕೋರೆಗಳನ್ನು, ಅಂಕು ಡೊಂಕುಗಳನ್ನು ಅರಿತುಕೊಂಡರು. ಮನುಪ್ರಣೀತ ಭೇದ ಭಾವನೆಗಳು, ಪುರೋಹಿತರ ಶೋಷಣೆ ಮತ್ತು ಸಿರಿವಂತರ ಭೋಗಲಾಲಸೆ ಇವೇ ಸಮಾಜದ ಎಲ್ಲ ಕೇಡಿನ ತಾಯಿಬೇರು ಎಂದು ಮನಗಂಡು ಅವುಗಳ ಮೇಲೆ ಕುಠಾರ ಪ್ರಹಾರವನ್ನಾರಂಭಸಿದರು. ಅದಕ್ಕಾಗಿ ಅವರು ಬಳಸಿದ ಬಲವತ್ತರವಾದ ಸಾಧನವೆಂದರೆ ಇಷ್ಟಲಿಂಗ. ಅದನ್ನು ಬಹುವಿಧವಾಗಿ ಪ್ರಯೋಗಿಸಿ ಎಲ್ಲ ಕ್ಷೇತ್ರಗಳಲ್ಲಿ ಏಕಕಾಲಕ್ಕೆ ಕ್ರಾಂತಿಯನ್ನುಂಟುಮಾಡಿದರು. ವ್ಯಷ್ಟಿವಿಕಾಸ, ಸಮಷ್ಟಿಯ ಆರೋಗ್ಯಪೂರ್ಣ ಬಲವರ್ಧನೆ, ಆಧ್ಯಾತ್ಮಿಕ ಸಾಧನೆ, ಸಮತಾ ವಾದದ ಉದ್ಘೋಷ ಶೋಷಣೆಯ ಮೂಲೋತ್ಪಾಟನೆ, ಅಪರಿಗ್ರಹ ಮತ್ತು ಸಮನಾದ ವಿತರಣೆ, ಔದ್ಯೋಗಿಕ ಕ್ರಾಂತಿ ಮುಂತಾದ ಕ್ಷೇತ್ರಗಳಲ್ಲಿ ಏಕಕಾಲಕ್ಕೆ ಬದಲಾವಣೆ ತರಲು ಇಷ್ಟಲಿಂಗವು ಅತಿ ಪ್ರಭಾವಿ ಸಾಧನವಾಯಿತು. ಇಂಥ ಸಮಗ್ರಕ್ರಾಂತಿಯನ್ನು ಯಾರೂ ಮಾಡಿದ್ದಿಲ್ಲ. ಬಸವಣ್ಣನವರು ಅದನ್ನು ಮಾಡಿದರು. ಅವರು ಒಂದು ಹೊಸ ಸಮಾಜದ ಕನಸನ್ನು ಕಂಡರು; ಹೊಸ ಪದ್ಧತಿಯನ್ನು ಕಾರ್ಯರೂಪದಲ್ಲಿ ತಂದರು. ಅದೇ ದೇಹಾಲಯ ಸಂಸ್ಕೃತಿ! ಭಾರತದಲ್ಲಿ ಸಾವಿರಾರು ವರ್ಷಗಳಿಂದ ಬಂದಂಥ ದೇವಾಲಯ ಸಂಸ್ಕೃತಿಯನ್ನು ನಿರಾಕರಿಸಿ ಹೊಸ ದೇಹಾಲಯ ಸಂಸ್ಕೃತಿಯ ಪ್ರಚಾರ, ಪ್ರಸಾರ ಮಾಡಿದರು. ಅದರ ಮೂಲ ಸಾಧನ ಇಷ್ಟಲಿಂಗವಾಗಿತ್ತು. ಮೇಲೆ ಹೇಳಿದಂತೆ ಈ ಇಷ್ಟಲಿಂಗದ ಹಲವಾರು ಪ್ರಯೋಜನಗಳುಂಟು. ಆ ಪ್ರಯೋಜನಗಳ ಮೊತ್ತವೇ ದೇಹಾಲಯ ಸಂಸ್ಕೃತಿ.

**ದೇಹಾಲಯ ಸಂಸ್ಕೃತಿ** : ಇದು ಎಲ್ಲ ಬಗೆಯ ಕ್ರಾಂತಿಬೀಜವಾಗಿದ್ದರಿಂದ ಇದನ್ನು ವಿವರವಾಗಿ ತಿಳಿದುಕೊಳ್ಳುವುದು ಅವಶ್ಯವಿದೆ. ಇದರಲ್ಲಿ ವ್ಯಷ್ಟಿ-ಸಮಷ್ಟಿ ಸಮನ್ವಯವಿದೆ. ಆಧ್ಯಾತ್ಮ ಮಾರ್ಗದ ಇದು ಕೈದೀವಿಗೆಯಾಗಿದೆ ಮತ್ತು ಅಜ್ಞಾನ-ಅನ್ಯಾಯಗಳ ನಿವಾರಣೆಯ ಸಿದ್ಧೌಷಧಿಯಾಗಿದೆ.

**ವ್ಯಕ್ತಿವಿಕಾಸ** : ಇಂದಿನ ಮಾನವ ಸಂಪನ್ಮೂಲ ವಿಕಾಸದ (H.R.D) ಪರಿಕಲ್ಪನೆ ದೇಹಾಲಯ ಸಂಸ್ಕೃತಿಯಲ್ಲಿ ಕಾಣಬಹುದು. ಅದರ ಸೂತ್ರವನ್ನು ಹಿಡಿದು ಬಸವಣ್ಣನವರು ಪ್ರತಿಯೊಬ್ಬ ವ್ಯಕ್ತಿಯ ವಿಕಾಸದ ಕಡೆಗೆ ಗಮನ ಹರಿಸಿದರು. ವ್ಯಕ್ತಿ ಯಾವುದೇ ಮಟ್ಟದಲ್ಲಿದ್ದರೂ, ಎಷ್ಟೇ ದಿನ, ದಲಿತ, ಪತಿತನಾಗಿದ್ದರೂ ಅವನಲ್ಲಿಯ ಆತ್ಮಶಕ್ತಿಯನ್ನು, ಜಾಗೃತಗೊಳಿಸಿ ಆತ್ಮವಿಶ್ವಾಸವನ್ನು ತುಂಬಿದರು. ತಾನೂ ಸಾಧನೆ ಮಾಡಿ ದಾನವನಿಂದ ಮಾನವ, ಮಾನವನಿಂದ ಮಹಾದೇವನಾಗಬಲ್ಲೆ ಎಂಬ ಚೈತನ್ಯ ಅವನಲ್ಲಿ ಉಂಟಾಯಿತು. ಸೂಳೆ ಸಂಕವ್ವೆ, ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯಂಥವರ ಉದಾಹರಣೆಗಳನ್ನು ಗಮನಿಸಬಹುದು. ಎಲ್ಲ ಜನರಿಗೆ ಅವಕಾಶ, ಅನುಕೂಲ, ಪ್ರೋತ್ಸಾಹ ದೊರೆತಿದ್ದರಿಂದ ಅವರೆಲ್ಲ ಮುಂದೆ ಬಂದು ಸಾಧನೆ ಮಾಡಿ ಶರಣರಾದರು. ಭಿಕಾರಿ ಭೀಮಯ್ಯ ಕೂಡ ಶರಣನಾದ ಎಂದರೆ ಎಲ್ಲರಿಗೂ ಯಾವ ರೀತಿಯ ಪ್ರೋತ್ಸಾಹ ದೊರೆಯುತ್ತಿತ್ತು ಎಂಬುದನ್ನು ಊಹಿಸಬಹುದು. ವ್ಯಕ್ತಿ ವಿಕಾಸದಿಂದ ಸಮಾಜ ಪುಷ್ಟವಾಗುತ್ತದೆ ಹಾಗೂ ಪುಷ್ಟ ಸಮಾಜದಲ್ಲಿ ವ್ಯಕ್ತಿಗೆ ಬೆಲೆ ಇರುತ್ತದೆ. ಹೀಗೆ ವ್ಯಷ್ಟಿ-ಸಮಷ್ಟಿ ಪರಸ್ಪರ ಪೂರಕವಾಗಿದ್ದು ಅವುಗಳ ಪೋಷಣೆಯ ಸಮನ್ವಯದಿಂದ ಕಲ್ಯಾಣ ರಾಜ್ಯ ನಿರ್ಮಾಣವಾಗುತ್ತದೆ.

**ಸಮಾಜ-ಪರಿವರ್ತನೆ** : ಸಮಾಜದಲ್ಲಿಯ ಎಲ್ಲ ವ್ಯಕ್ತಿಗಳ ವಿಕಾಸದಿಂದ ಮಾತ್ರ ಸಮಾಜದಲ್ಲಿ ಪರಿವರ್ತನೆ ಸಾಧ್ಯ. ಸಾಮಾಜಿಕ ಮೌಢ್ಯಗಳಾದ ಅಜ್ಞಾನ, ಅನಕ್ಷರತೆ, ಅಸಮಾನತೆ, ಶೋಷಣೆ, ಆಲಸ್ಯ, ಪರಿಗ್ರಹ(ಸಂಗ್ರಹ ವೃತ್ತಿ) ಡಾಂಭಿಕತೆ, ಅಹಂಕಾರ, ಅಸೂಯೆ ಮುಂತಾದುವುಗಳ ನಿವಾರಣೆಯಾಗದೆ ಆರೋಗ್ಯಪೂರ್ಣ ಸಮಾಜ ನಿರ್ಮಾಣವಾಗಲಾರದು ಎಂದು ಮನಗಂಡ ಬಸವಣ್ಣನವರು ಏಕಕಾಲಕ್ಕೆ ಅವುಗಳ ವಿರುದ್ಧ ಹೋರಾಟವನ್ನು ಕೈಗೊಂಡರು. ಓದು ಬರಹ, ಜ್ಞಾನಪ್ರಸಾರ, ಇಷ್ಟಲಿಂಗಧಾರಿಗಳೆಲ್ಲ ಒಂದು ಪುರೋಹಿತಶಾಹಿಯ ನಿರಾಕರಣೆ, ಕಾಯಕ, ದಾಸೋಹ, ಗುರುಲಿಂಗಜಂಗಮಗಳ ಉಪಾಸನೆ ಮುಂತಾದ ಉಪಾಯಗಳ ಮೂಲಕ ಸಾಮಾಜಿಕ ಅನಿಷ್ಟಗಳನ್ನು ತೊಡೆದು ಹಾಕಲು ಅವರು ಹಗಲಿರುಳು ಹೆಣಗಾಡಿದರು. ಅದಕ್ಕಾಗಿ ಅನುಭವ ಮಂಟಪವನ್ನು ಸ್ಥಾಪಿಸಿ ಅದರ ಮುಖಾಂತರ ಸಕಾರಾತ್ಮಕ ಚಟುವಟಿಕೆಗಳನ್ನು ಕೈಕೊಂಡರು. ಗಣಪರ್ವ(ಶರಣರ ಮನೆಗಳಲ್ಲಿ ಅನುಭಾವ ಗೋಷ್ಠಿ) ಎಂಬ ಹೊಸ ವಿಧಾನವನ್ನು ಅನುಸರಿಸಿ ಶರಣರಲ್ಲಿ ಆತ್ಮೀಯತೆ, ಪ್ರೀತಿ-ವಿಶ್ವಾಸ, ಸಮಾನತೆಯ ಭಾವ ಮೂಡಿಸಿದರು. ಹೀಗಾಗಿ ವೈಯಕ್ತಿಕತೆಯಿಂದ ಸಾಮಾಜಿಕತೆಯ ಕಡೆಗೆ ಅವರನ್ನು ಕೊಂಡೊಯ್ದರು. ವ್ಯಕ್ತಿ ಸಾಮಾಜಿಕ ಪ್ರಾಣಿ ಎಂಬ ಭಾವನೆ ಶರಣರಲ್ಲಿ ಮೂಡಿತು. ದಾಸೋಹತತ್ವ ಕೂಡ ವ್ಯಕ್ತಿಯ ಸಾಮಾಜೀಕರಣವನ್ನು ಎತ್ತಿ ಹಿಡಿಯುತ್ತದೆ. ಸಮಾಜಕ್ಕಾಗಿ ತಾನು ಎಂಬ ಭಾವ ಬಲಿಯುತ್ತದೆ. ಆಗ ವ್ಯಕ್ತಿಗತ ಹಿತವನ್ನು ತೊರೆದು ಸಮಾಜಕ್ಕಾಗಿ ಬಲಿದಾನ ಮಾಡಲು ಮನುಷ್ಯ ಮುಂದಾಗುತ್ತಾನೆ. ಇಂತಹ ತ್ಯಾಗಭಾವನೆ ಎಲ್ಲ ಶರಣರಲ್ಲಿ ಮೂಡಿತ್ತು. ಅಂತೆಯೇ ಸಾವಿರಾರು ಶರಣರು ಜಂಗಮರಾಗಿ, ಚರ ಜಂಗಮರಾಗಿ ಸಮಾಜ ಪರಿವರ್ತನೆಗಾಗಿ ದುಡಿದರು. ತಕ್ಕೆಯ ಕಾಯಕ, ಮುಳ್ಳಾವಿಗೆಯ ಕಾಯಕ ಕುಡುಗೋಲ ಕಾಯಕ ಮುಂತಾದ ಉಪಾಯಗಳನ್ನು ಕೈಕೊಂಡು ಅವರು ಸಮಾಜದಲ್ಲಿಯ ಜಾಡ್ಯವನ್ನು ಹೋಗಲಾಡಿಸಿದರು; ಹೊಸ ಚೈತನ್ಯವನ್ನು ಮೂಡಿಸಿದರು.

**ದೇಹಾಲಯದ ಅನುಷ್ಠಾನ** : ಇದು ಎರಡು ಸ್ತರದಲ್ಲಿ ನಡೆಯಿತು. ವ್ಯಕ್ತಿಗತ ದೇಹಾಲಯದ ಅನುಷ್ಠಾನ ಮತ್ತು ಸಾಮಾಜಿಕ ಅನುಷ್ಠಾನ. ಬಸವಣ್ಣನವರು ಹೇಳಿದಂತೆ 'ದೇಹವೇ ದೇಗುಲ' ಎಂದರೆ ದೇಹಾಲಯ. ನಮ್ಮಲ್ಲಿರುವ ಮೂರು ದೇಹಗಳಲ್ಲಿ ಮೂರು ದೇವರುಂಟು. ಸ್ಥೂಲ ದೇಹದಲ್ಲಿ ಇಷ್ಟಲಿಂಗ, ಸೂಕ್ಷ್ಮ ದೇಹದಲ್ಲಿ ಪ್ರಾಣಲಿಂಗ ಮತ್ತು ಕಾರಣದೇಹದಲ್ಲಿ ಭಾವಲಿಂಗ. ದೇಹದಲ್ಲಿ ದೇವರಿದ್ದುದರಿಂದ ಆ ದೇಹ ಶುಚಿ, ಶುದ್ಧ ಮತ್ತು ಪವಿತ್ರವಾಗಿರಲೇಬೇಕು. ಅಲ್ಲಿ ಅಶೌಚ, ಅಶುದ್ಧತೆ ಮತ್ತು ಅಪವಿತ್ರವಾದ ಸೂತಕಗಳಿಗೆ ಆಸ್ಪದವಿಲ್ಲ. ಆಗ ಮಾತ್ರ ಅದು ದೇವಮಂದಿರವಾಗುತ್ತದೆ. ಅದಕ್ಕಾಗಿ ಮೊದಲ ಹೆಜ್ಜೆ ಎಂದರೆ ಅಕ್ಕ ಮಹಾದೇವಿ ಹೇಳಿದಂತೆ 'ಆಹಾರವ ಕಿರಿದು ಮಾಡಿರಣ್ಣ' ಅದಕ್ಕಾಗಿಯೇ ಪ್ರಸಾದತತ್ತ್ವವನ್ನು ಬೋಧಿಸಲಾಗಿದೆ. ಹಿತವಾದ, ಮಿತವಾದ, ಋತವಾದ ಮತ್ತು ನಿಯತವಾದ ಆಹಾರ ಮಾತ್ರ ಪ್ರಸಾದವಾಗಲು ಸಾಧ್ಯ. ಇಂಥ ಆಹಾರವನ್ನು ಲಿಂಗಾರ್ಪಿತ ಮಾಡಿ ಲಿಂಗಭೋಗೋಪಭೋಗಿಯಾಗಿ ಸೇವಿಸಿದರೆ ಅದು ಪ್ರಸಾದ. ಈ ಪ್ರಸಾದ ಸೇವನೆಯಿಂದ ಮಾಂಸಪಿಂಡ ಹೋಗಿ ಮಂತ್ರ ಪಿಂಡವಾಗುತ್ತದೆ. ಇದೇ ದೇಹಾಲಯ, ದೇವಮಂದಿರ.

ಇನ್ನು ಸೂಕ್ಷ್ಮ ಮತ್ತು ಕಾರಣ ದೇಹಗಳನ್ನು ದೇವಮಂದಿರ ಮಾಡಲು ಹಲವಾರು ವಿಧಾನಗಳನ್ನು ಬೋಧಿಸಲಾಗಿದೆ. ಇವುಗಳಿಗೆಲ್ಲ ಮೂಲ ಸೂತ್ರ ಇಷ್ಟಲಿಂಗವೇ ಆಗಿದೆ. ಅದರ ನಿರೀಕ್ಷಣೆ, ಅರ್ಪಣೆ ಮತ್ತು ಅನುಭವ ಇವು ಕೆಲವು ವಿಧಾನಗಳಿವೆ. ಜೊತೆಗೆ ಪಂಚಾಚಾರಗಳು ಮತ್ತು ಷಟ್‌ಸ್ಥಲಗಳು ಪ್ರಮುಖ ಪಾತ್ರ ವಹಿಸುತ್ತವೆ. ಸ್ತೋತ್ರ, ಜಪ ಮತ್ತು ಧ್ಯಾನ ಇವು ಲಿಂಗ ನಿರೀಕ್ಷಣೆಯ ಮೂರು ಹಂತಗಳು. ಅದೇ ವೇಳೆಗೆ ಕಾಯಾರ್ಪಣ, ಕರಣಾರ್ಪಣ ಮತ್ತು ಭಾವಾರ್ಪಣ ಎಂಬ ಮೂರು ಬಗೆಯ ಅರ್ಪಣೆ ಮಾಡಬೇಕಾಗುತ್ತದೆ. ಷಟ್‌ಸ್ಥಲಗಳಲ್ಲಿ ಸಕೀಲಗಳನ್ನು ಅಳವಡಿಸಿ ಆರು ಇಂದ್ರಿಯಗಳಲ್ಲಿ, ಆರು ಲಿಂಗಗಳಿಗೆ ಆರು ಹಸ್ತಗಳ ಮುಖಾಂತರ, ಆರು ಪದಾರ್ಥಗಳನ್ನು ಅರ್ಪಿಸಿ, ಆರು ಪ್ರಸಾದಗಳನ್ನು ತೃಪ್ತಿ-ಸಂತೃಪ್ತಿ ಎಂಬ ಅನುಭವ ಪಡೆದು ಆತ್ಮದಲ್ಲಿರುವ ಮಹಾಲಿಂಗದಲ್ಲಿ ನಿಶ್ಚಿಂತವಾಗಿರುವುದೇ ಸೂಕ್ಷ್ಮ ಮತ್ತು ಕಾರಣ ದೇಹಾಲಯಗಳ ನುಷ್ಠಾನವಾಗುತ್ತದೆ. ಸಕೀಲಗಳ ವಿಸ್ತಾರ ಅಪರಿಮಿತವಾಗಿದೆ.

ಸುಜ್ಞಾನಿ ಗುರುಗಳಿಂದ ಅದನ್ನೂ ಅರಿಯಬಹುದು. ಇದು ವ್ಯಕ್ತಿಗತವಾದ ಅನುಷ್ಠಾನದ ಸಂಕ್ಷಿಪ್ತ ವಿವರವಾಯಿತು.

ಮತ್ತೊಂದು ಸ್ತರದಲ್ಲಿ ದೇಹಾಲಯದ ಅನುಷ್ಠಾನವು ಸಾಮೂಹಿಕವಾಗಿ ನಡೆಯುತ್ತದೆ. ಅದಕ್ಕಾಗಿಯೇ 'ಅನುಭವ ಮಂಟಪ' ಸ್ಥಾಪನೆಯಾಗಿತ್ತು. ಇಂದಿನ ಪರಿಭಾಷೆಯಲ್ಲಿ ಅದು ಸಮೂಹ ಮಾಧ್ಯಮವಾಗಿತ್ತು. ಇಲ್ಲಿ ಅನುಭವ ಮಂಟಪದ ಬಗೆಗೆ ಹಲವು ಮಾತುಗಳನ್ನು ಹೇಳಬೇಕು. ಸಾಮಾಜಿಕ ಪ್ರಜ್ಞೆಯನ್ನು ಮೂಡಿಸಲು ಮುಖ್ಯವಾಗಿ ಅನುಭವ ಮಂಟಪ ಸಾಧನವಾಗಿತ್ತು. ಅಲ್ಲಿ ತರಬೇತಿ ಪಡೆದ ಶರಣರು ಚರಜಂಗಮರಾಗಿ ಎಲ್ಲೆಡೆ ಬಸವತತ್ತ್ವಗಳ ಪ್ರಸಾರ ಮಾಡುತ್ತಿದ್ದರು. ವಚನ ಸಾಹಿತ್ಯವನ್ನು ತಮ್ಮ ಜೊತೆಗೆ ಕೊಂಡೊಯ್ದು ಜನರಲ್ಲಿ ವಿತರಿಸುತ್ತಿದ್ದರು. ಅವರು ಎಂದೂ ಮಠಮಾನ್ಯಗಳಿಗೆ ಮಹತ್ವ ಕೊಡಲಿಲ್ಲ. ಬಸವಣ್ಣನವರ ಪೂರ್ವದಲ್ಲಿ ಮಠಗಳ ಪರಂಪರೆ ಇತ್ತು. ಮಠಾಧಿಕಾರಿಗಳು ಬಸವಣ್ಣನವರ ಹೊಸ ಸಂಸ್ಕೃತಿಗೆ ಮಾರುಹೋಗಿ ಶರಣರಾದರು. ಅವರೂ ಬಸವ ಸಂಸ್ಕೃತಿಯ ಪ್ರಸಾರ ಮಾಡಿದರು. ಆದರೆ ಕಲ್ಯಾಣಕ್ರಾಂತಿಯಿಂದಾಗಿ ಶರಣರು ಚದುರಿ ಹೋದರು. ಅನುಭವ ಮಂಟಪದ ಪರಂಪರೆ ಖಂಡಿತವಾಯಿತು. ವಚನ ಸಾಹಿತ್ಯವೂ ಚದುರಿಹೋಯಿತು. ಮಠಗಳಲ್ಲಿ ಮತ್ತು ಶ್ರೀಸಾಮಾನ್ಯರ ಮನೆಗಳಲ್ಲಿ ಗುಪ್ತವಾಗಿ ಉಳಿಯಿತು. ಕಾಲಾಂತರದಲ್ಲಿ ಎಷ್ಟೋ ಸಾಹಿತ್ಯ ಹಾಳಾಯಿತು. ಮಠಗಳಲ್ಲಿ ಹಳೆಯ ಸಂಪ್ರದಾಯ ಮತ್ತು ಬಸವಸಂಪ್ರದಾಯಗಳ ಕಲಸುಮೇಲೋಗರವಾಯಿತು. ಅತಿ ಭೀಕರವಾದ ಹಾನಿ ಎಂದರೆ ಅನುಭವ ಮಂಟಪದ ಪರಂಪರೆ ನಿಂತು ಹೋಗಿ ಸಮಾಜ ವ್ಯವಸ್ಥೆ ಮತ್ತು ಸಂಘಟನೆ ಕುಸಿದು ಬಿದ್ದಿತು. ವೈಯಕ್ತಿಕ ಪ್ರತಿಷ್ಠೆ ತಲೆ ಎತ್ತಿ ಸಾಮಾಜಿಕ ಪ್ರಜ್ಞೆ ಲೋಪವಾಯಿತು. ಹೀಗಾಗಿ ಲಿಂಗಾಯತರು ಅಸಂಘಟಿತರಾದರು. ಮಠಮಠಗಳಲ್ಲಿ ಹೊಂದಾಣಿಕೆ, ಸಮನ್ವಯ, ಏಕರೂಪತೆ ಇಲ್ಲದಂತಾಯಿತು. ಶರಣರ ವಚನಗಳನ್ನು ಮನಬಂದಂತೆ ಅರ್ಥೈಸಲಾಯಿತು. ಒಂದು ರೀತಿಯ ಅರಾಜಕತೆ ಉಂಟಾಯಿತು. ಇದರ ಕಹಿ ಪರಿಣಾಮಗಳನ್ನು ನಾವು ಇಂದೂ ಅನುಭವಿಸುತ್ತಿದ್ದೇವೆ. ಇದಕ್ಕೆ ಏಕೈಕ ಉಪಾಯವೆಂದರೆ 'ಅನುಭವ ಮಂಟಪ' ಸಂಸ್ಕೃತಿಯ ಪುನರುಜ್ಜೀವನ. ಇಂದು ನಮಗೆ ಎಲ್ಲೆಡೆ, ಊರೂರಿಗೆ, ಪಟ್ಟಣ ಪಟ್ಟಣಗಳಿಗೆ, ನಗರನಗರಗಳಲ್ಲಿ ಅನುಭವ ಮಂಟಪಗಳು ಬೇಕಾಗಿವೆ. ನಮಗೆ ಮಠಗಳು ಬೇಡ, ಮಂದಿರಗಳು ಬೇಡ, ದೇವಾಲಯ ಸಂಸ್ಕೃತಿ ಬೇಡ, ನಮಗೆ ಬೇಕು 'ಅನುಭವ ಮಂಟಪ'ಗಳು ಮತ್ತು ಅಲ್ಲಿ ಬೋಧಿಸಲ್ಪಡುವ ದೇಹಾಲಯ ಸಂಸ್ಕೃತಿ ಮಾತ್ರ. ಪುರೋಹಿತರು, ಮಠಾಧೀಶರು ಬೇಡ. ಕೇವಲ ಶರಣರು ಬೇಕು ಆಗ ಮಾತ್ರ ನಮ್ಮಲ್ಲಿ ಸಾಮಾಜಿಕ ಪ್ರಜ್ಞೆ ಮೂಡಬಲ್ಲುದು.

ದೇಹಾಲಯದ ಸಾಮಾಜಿಕ ಅನುಷ್ಠಾನಕ್ಕಾಗಿ ಮುಖ್ಯವಾಗಿ 'ಅನುಭವ ಮಂಟಪ' ಬೇಕು. ಅಲ್ಲಿ ಶರಣರ ಭಾವ ಚಿತ್ರಗಳು ಮಾತ್ರವಿರಬೇಕು. ಪೂಜಾದಿ ಆಡಂಬರವಿರಬಾರದು. ಅಲ್ಲಿ ಸೇರುವ ಎಲ್ಲ ಶರಣರು ಸಮಾನರು. ತಾತ್ತ್ವಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ, ಮುಂತಾದ ಎಲ್ಲ ಕ್ಷೇತ್ರಗಳ ಕುರಿತು ಮುಕ್ತ ಚರ್ಚೆ ನಡೆಯಬೇಕು. ಸರ್ವಸಮ್ಮತವಾದ ನಿರ್ಣಯಗಳನ್ನು ಕೈಗೊಂಡು ಅದನ್ನು ಸಮಾಜದಲ್ಲಿ ಪ್ರಚುರಪಡಿಸಬೇಕು. ವಚನಸಾಹಿತ್ಯವೇ ನಮಗೆ ಪ್ರಮಾಣವಾಗಬೇಕು. ಅದನ್ನು ಆಧಾರವಾಗಿಟ್ಟುಕೊಂಡು ಇಂದಿನ ಕಾಲಕ್ಕೆ ತಕ್ಕಂತೆ ಸೂಕ್ತ ಮಾರ್ಪಾಟು ಮಾಡಿಕೊಳ್ಳಬಹುದು. ಜೊತೆಗೆ ಗಣಪರ್ವವನ್ನು ಜಾರಿಯಲ್ಲಿ ತರಬೇಕು. ಗಣಪರ್ವವೆಂದರೆ ಇಂದಿನ ಭಾಷೆಯಲ್ಲಿ ಮನೆಯಲ್ಲಿ ಮಹಾಮನೆ, ಮನೆಮನೆಯಲ್ಲಿ ಬಸವತತ್ತ್ವ ಅಥವಾ ಮನೆಮನೆಗಳಲ್ಲಿ ಬಸವಜ್ಯೋತಿ, ಮನೆಗೆ ಶರಣರನ್ನು ಆಹ್ವಾನಿಸಿ, ಅನುಭಾವ ಗೊಷ್ಠಿ ಮಾಡಿ, ಸೂಕ್ತ ನಿರ್ಣಯ ಕೈಗೊಂಡು ಕೊನೆಯಲ್ಲಿ ಮಹಾಪ್ರಸಾದ ಮಾಡಬೇಕು. ಅಲ್ಲಿ ಕೈಕೊಂಡ ನಿರ್ಣಯಗಳನ್ನು ಸಮಾಜದಲ್ಲಿ ಅನುಷ್ಠಾನಗೊಳಿಸಬೇಕು. ವಚನಸಾಹಿತ್ಯದ ಪ್ರಸಾರಕ್ಕಾಗಿ ಚಿಕ್ಕ ಚಿಕ್ಕ ಹೊತ್ತಿಗೆಗಳನ್ನು ಮುದ್ರಿಸಿ ವಿತರಿಸಬೇಕು. ಆಳವಾದ ಅಧ್ಯಯನಕ್ಕಾಗಿ ಅಲ್ಲಲ್ಲಿ ಗ್ರಂಥಾಲಯಗಳನ್ನು ನಡೆಸಬೇಕು. ಅಧ್ಯಯನ ಮಾಡುವವರಿಗೆ ಎಲ್ಲ ರೀತಿಯ ಸೌಕರ್ಯಗಳನ್ನು ಒದಗಿಸಬೇಕು. ಅವರು ಅಧ್ಯಯನದ ನಂತರ ಉಪನ್ಯಾಸ ನೀಡಿ ಅಥವಾ ಲೇಖನ ಅಥವಾ ಗ್ರಂಥವನ್ನು ಬರೆದು ಪ್ರಕಟಿಸಬೇಕು. ಹೀಗೆ ತಮ್ಮ ಜ್ಞಾನವನ್ನು ಸಮಾಜಕ್ಕೆ ನೀಡಬೇಕು. ಇಂಥ ಹತ್ತು ಹಲವಾರು ಯೋಜನೆಗಳನ್ನು ಹಮ್ಮಿಕೊಂಡು ಅವನ್ನು ಅನುಷ್ಠಾನಗೊಳಿಸಬೇಕು. ಆಗ ವೈಯಕ್ತಿಕ ಅಥವಾ ಕೌಟುಂಬಿಕ ಹಿತಾಸಕ್ತಿಯ ಮೋಹ ಕಡಿಮೆಯಾಗಿ ಸಾಮಾಜಿಕ ಹೊಣೆಗಾರಿಕೆ ಹೆಚ್ಚಾಗುವುದು. ಸಮೂಹಪ್ರಜ್ಞೆ ಬಲವತ್ತರವಾಗಿ ಸಮಾಜ ಸ್ವಾಸ್ಥ್ಯ ಉಂಟಾಗುವುದು.

**ವಿದೇಹಾಲಯದ ಕಡೆಗೆ :** ಶರಣರ ದೃಷ್ಟಿಯಲ್ಲಿ ವ್ಯಕ್ತಿವಿಕಾಸ ಮತ್ತು ಸಮಾಜಸ್ವಾಸ್ಥ್ಯ ಇಷ್ಟೇ ಜೀವನದ ಗುರಿಯಲ್ಲ. ಇದಕ್ಕೂ ಮುಂದೆ ಹೋಗಿ ಮಾನವ ಮಹಾಮಾನವನಾಗಬೇಕು, ಮಹಾಮಾನವನಿಂದ ದೇವಮಾನವನಾಗಬೇಕು; ದೇವಮಾನವನಿಂದ ವಿಶ್ವಮಾನವನಾಗಬೇಕು; ಕೊನೆಗೆ ವಿಶ್ವ ಭರಿತನಾಗಬೇಕು. ಅದನ್ನೇ ಶರಣರು 'ಶೂನ್ಯಸಂಪಾದನೆ' ಎಂದು ಕರೆದರು. 'ಲಿಂಗಾಂಗ ಸಾಮರಸ್ಯ' ವ್ಯಕ್ತಿತ್ವವನ್ನು ಕಳೆದುಕೊಂಡು ಲಿಂಗದಲ್ಲಿ ಸಮರಸವಾಗಲು ಹೇಳಿದರೆ, 'ಶೂನ್ಯಸಂಪಾದನೆ' ವ್ಯಷ್ಟಿ, ಸಮಷ್ಟಿ, ವಿಶ್ವ, ಪರಮಾತ್ಮ ಎಲ್ಲವೂ ಮಾಯವಾಗಿ ಏಕಾಕಾರವನ್ನು ಹೊಂದುವುದನ್ನು ಬೋಧಿಸುತ್ತದೆ. ಇದೇ ಶರಣರ ದೃಷ್ಟಿಯಲ್ಲಿ ಪರಮಗುರಿ. ಅದನ್ನು ಪಡೆಯುವುದಕ್ಕಾಗಿ ನಿರಂತರ ಅಭ್ಯಾಸ ಬೇಕಾಗುತ್ತದೆ. ಲಿಂಗಪೂಜೆ, ಲಿಂಗನಿರೀಕ್ಷೆ, ಲಿಂಗಾರ್ಪಣ, ಲಿಂಗಪ್ರಸಾದ, ಲಿಂಗಭೋಗ, ಲಿಂಗಾನುಸಂಧಾನ ಮಾಡುತ್ತಾ ಲಿಂಗಾ ನಂದದಲ್ಲಿ ಲೋಲಾಡಬೇಕು. ಈ ಅಂತರಂಗದ ಪರಿಣಾಮ ಬಹಿರಂಗದಲ್ಲಿ ಒಡಮೂಡಬೇಕು. ಲಿಂಗನುಡಿ, ಲಿಂಗನಡೆ, ಲಿಂಗಭೋಗ, ಲಿಂಗದರ್ಶನ, ಲಿಂಗಸ್ವರೂಪ, ಲಿಂಗಾಕಾರ, ಲಿಂಗಮಯವಾಗಿ ಶರಣನು ಚರಿಸಬೇಕು. ಆಗ ಲಿಂಗಸ್ಪರ್ಶ ಪರುಷವಾಗುವುದು. ಲಿಂಗನುಡಿ ಮಹಾಲಿಂಗದರ್ಶನ ನೀಡುವುದು. ಮಹಾಲಿಂಗದರ್ಶನದಿಂದ ಶೂನ್ಯಲಿಂಗದ ಅಥವಾ ಪ್ರಾಣಲಿಂಗದ ಅಣುಲಿಂಗದ ಅರಿವಾಗುವುದು. ಅಣುಲಿಂಗದಿಂದ ಶೂನ್ಯಸಂಪಾದನೆ ಪ್ರಾಪ್ತವಾಗುವುದು. ಇದೇ ವಿದೇಹಾಲಯ. ಅಲ್ಲಿ ಜೀವಿಗಳ ದೇಹ ಅಷ್ಟೇ ಅಲ್ಲದೆ ವಿಶ್ವದ ದೇಹವಾದ ಪ್ರಪಂಚವೂ ನಾಸ್ತಿಯಾಗಿ 'ಎಲ್ಲಿ ನೋಡಿದಡಲ್ಲಿ ನೀನೇ ದೇವಾ' ಎಂಬ ಅನುಭವವಾಗುತ್ತದೆ. ಇದೇ ವಿದೇಹಾಲಯ.

ದೇಹಾಲಯ ಸಂಸ್ಕೃತಿಯ ವಿಸ್ತಾರ ವಿರಾಟ ಸ್ವರೂಪದ್ದು. ಅದರ ಅಧ್ಯಯನ ನಡೆಯಬೇಕಾಗಿದೆ. ಶರಣರು ದೇವಾಲಯ ಸಂಸ್ಕೃತಿಯನ್ನು ಬಿಡಿಸಿ ದೇಹಾಲಯ ಸಂಸ್ಕೃತಿ ಯನ್ನು ಬೋಧಿಸಿದರು. ಅಲ್ಲಿ ಮುಕ್ತತೆ ಇದೆ, ಸಮಾನತೆ ಇದೆ, ಜ್ಞಾನಾಂಜನವಿದೆ, ಚೈತನ್ಯವಿದೆ. ಪ್ರಸನ್ನತೆ ಇದೆ. ಶಾಂತಿ ಇದೆ, ಸರ್ವಶೂನ್ಯ ನಿರಾಲಂಬ ಸ್ಥಿತಿ ಇದೆ. ಅಲ್ಲಿ ಯಾರೂ ಭಕ್ತರಲ್ಲ, ಯುಕ್ತರಲ್ಲ, ಮಠಾಧಿಪತಿಗಳಲ್ಲ, ದೀನದಲಿತರಲ್ಲ, ಶ್ರೇಷ್ಠರಲ್ಲ, ಕನಿಷ್ಠರಲ್ಲ, ಆದರೆ ಎಲ್ಲರೂ ಶರಣರು, ಲಿಂಗವಂತರು, ಲಿಂಗಾಕಾಂಕ್ಷಿಗಳು, ಲಿಂಗಾಂಶಸಂಭೂತರು.

ಈ ದೇಹಾಲಯ ಸಂಸ್ಕೃತಿ ಲಿಂಗಾಯತರಿಗೆ ಸೀಮಿತ ಅಲ್ಲ. ಇಡಿ ಮಾನವ ಜನಾಂಗಕ್ಕೆ ಸಂಬಂಧಿಸಿದುದು, ಅಷ್ಟೇ ಅಲ್ಲ ಎಲ್ಲ ಜೀವರಾಶಿಗಳಿಗೆ ಸಂಬಂಧಪಟ್ಟದ್ದು. ಬಸವಣ್ಣನವರು ಎಲ್ಲರಿಗೂ ಬೇಕಾದವರು. ಎಲ್ಲರನ್ನೂ ಅಪ್ಪಿಕೊಂಡವರು. ಎಲ್ಲರನ್ನೂ ನಮ್ಮವರೆಂದು ಕರೆದವರು. 'ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು' ಎಂದು ಬೋಧಿಸಿದವರು. ಅವರ ಬಟ್ಟೆಯಲ್ಲಿ ನಾವೂ ಸಾಗೋಣ. ಅವರಂತೆ ವಿಶ್ವಮಾನವರಾಗೋಣ! ಜಯ ಬಸವೇಶ !

*

## ಮಾಡಿದ ಪ್ರಯತ್ನಕ್ಕೆ ಫಲ ಇದ್ದೇ ಇರುತ್ತದೆ

*ಭೂಮಿಯೊಳಗೆ ಬೀಜ ಬಿದ್ದಲ್ಲಿ ಕೆಟ್ಟಿತ್ತೆಂದೆನಬೇಡ*
*ಮುಂದಣ ಫಲದೊಳಗರಿಸಿಕೊ!*
*ಕಾಸಿ ಕರಗಿಸಿದ ಬಂಗಾರ ಕೆಟ್ಟಿತ್ತೆನಬೇಡ*
*ಮುಂದಣ ಬಣ್ಣದೊಳಗರಿಸಿಕೊ !*
*ಹೊತ್ತಿಸಿದ ದೀಪ್ತಿ ಕೆಟ್ಟಿತ್ತೆಂದೆನಬೇಡ*
*ಮುಂದಣ ಅಗ್ನಿಯೊಳಗರಸಿಕೊ !*
*ಲಿಂಗದೊಳಗೆ ಪ್ರಾಣ, ಪ್ರಾಣದೊಳಗೆ ಲಿಂಗ*
*ಇದು ಕೂಡಲ ಚೆನ್ನಸಂಗನ ಶರಣರ*
*ಪಾದ ಪ್ರತಿಬಿಂಬದೊಳಗರಿಸಿಕೊ !ಸಂಗನ ಬಸವಣ್ಣನ*

–ಚೆನ್ನಬಸವಣ್ಣನವರು

ಭೂಮಿಯಲ್ಲಿ ಬೀಜ ಉತ್ತುವ ಉದ್ದೇಶವೇನಂದರೆ ಅದರಿಂದ ಫಲ ಪಡೆಯಬೇಕೆಂಬ ದೃಷ್ಟಿಯಿಂದ, ಒಂದೊಂದು ಸಲ ರೈತನು ಬಿತ್ತಿದ ಸಹಿತ ಬೆಳೆ ಬರಲಿಲ್ಲವೆಂದು ವಿಷಾದದಿಂದ ಹೇಳುವನು ಯಾಕಂದ್ರೆ ಆ ವರ್ಷ ಮಳೆ ಕೈಕೊಟ್ಟಿರುತ್ತದೆ. ಆಶಾದಾಯಕ ದೃಷ್ಟಿಯಿಂದ ಬಿತ್ತಿರುತ್ತಾನೆ. ಬೀಜ ಹೋಯಿತು ಎಂದೆನಬೇಡ. ಅದನ್ನು ಮುಂದಿನ ವರ್ಷದ ಅದೇ ಹೊಲದಲ್ಲಿ ದೇವರ ಅನುಗ್ರಹದಲ್ಲಿ ಹೆಚ್ಚಿನ ಪ್ರಮಾಣ ಬೆಳೆಯಬಹುದು. ಅದೇ ರೀತಿ ಬಂಗಾರದ ಆಭರಣ ಮಾಡುವಾಗ ಹೆಚ್ಚಿಗೆ ಕಾಯಿಸಿದಾಗ ಬಂಗಾರ ಅಗ್ನಿಷ್ಟಿಕೆಯಲ್ಲಿದ್ದ ಬಂಗಾರದ ಕಣಗಳನ್ನು ಆರಿಸಿ, ಬಣ್ಣದಲ್ಲಿ ಕರಗಿಸಿ ಪುನಃ ಆಭರಣ ಮಾಡಿದಾಗ ಅದನ್ನು ಪುನಃ ಪಡೆದು ಕೊಳ್ಳಬಹುದು. ಬೆಳಕನ್ನು ಕೊಡುವ ಸಲುವಾಗಿ, ಕತ್ತಲೆಯನ್ನು ಹೋಗಲಾಡಿಸುವ ಸಲುವಾಗಿ ದೀಪವನ್ನು ಹಚ್ಚಬೇಕಾ ಗುವುದು. ಈ ದೀಪದ ಸಹಾಯದಿಂದ ಅಗ್ನಿಯನ್ನು ಹೊತ್ತಿಸಬೇಕಾಗುವದು. ದೀಪವೇ ನಂದಿ ಹೋದಾಗ, ಮತ್ತೆ ಅದಕ್ಕೆ ಬೆಳಕು ಹಚ್ಚಬೇಕಾಗುವುದು.

ಗುರು–ಲಿಂಗ–ಜಂಗಮ ಈ ಮೂರು ಒಂದೇ ಕಾಯ ಗುರು, ಪ್ರಾಣಲಿಂಗ, ಜ್ಞಾನ ಜಂಗಮ ನಾವು ಮಾಡಿದ ಕೆಲಸಕ್ಕೆ ಪ್ರತಿಫಲವಿಲ್ಲದೆ ಹೋಗಬಹುದು. ಆದರೆ ಕೆಲಸದಿಂದುಂಟಾದ ಪರಿಣಾಮ, ಅನುಭವಗಳು ನಮಗೆ ಮುಂದಿನ ಕೆಲಸದಲ್ಲಿ ಉತ್ತಮ ಫಲಿತಾಂಶ ಕೊಡುವುವು. ಕಾರಣ ಪ್ರಯತ್ನ ವಿಫಲವೆಂದೆನಬೇಡ. ಅದು ನಮ್ಮ ಯಶಸ್ಸಿಗೆ ಮುಂದೆ ದಾರಿಯಾಗುವುದು. ಆಲಸ್ಯ, ಆಲಕ್ಷ್ಯದಿಂದಿರುವವನು ಎಂದೂ ಮುಂದೆ ಬರುವುದಿಲ್ಲ. ನಿರಂತರ ಪ್ರಯತ್ನದಲ್ಲಿರುವವನಿಗೆ ಒಂದಿಲ್ಲ ಒಂದು ದಿನ ಪರಮೇಶ್ವರನ ಅನುಗ್ರಹದಿಂದ ಪ್ರಗತಿಫಲವನ್ನು ಪಡೆಯುವನು.

# ಶರಣರು ಕಂಡ ಸಂಸಾರ

–ಶ್ರೀಮತಿ ಶಿಲ್ಪಾ ಎಸ್.ಸುಂಕದ, ಬಸವ ಕ್ಲಿನಿಕ್, ಬಸವ ನಿಲಯ, ಕನಕದಾಸ ವೃತ್ತ, ಕುಷ್ಟಗಿ–584 121.

*'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ*
*ಸತಿಪತಿಗಳೊಂದಾಗದ ಭಕ್ತಿ ಅಮೃತದೊಳು*
*ವಿಷಬೆರೆಸಿದಂತೆ ಕಾಣಾರಾಮನಾಥ'*

ಸತಿಪತಿಗಳ ಆದರ್ಶ ಜೀವನದ ಬಗ್ಗೆ ನಮ್ಮ ಶಿವಶರಣರು ಕೊಟ್ಟ ವಚನಗಳು ಅಮೋಘ ಮತ್ತು ಅಪ್ರತಿಮ. ಆ ವಚನಗಳಲ್ಲಿ ಹೊಕ್ಕು ನೋಡಿದಾಗ ನಮ್ಮ ಬದುಕು ಎಷ್ಟೊಂದು ದುಸ್ತರ ಹಾಗೂ ನಿರರ್ಥಕ ಎನ್ನುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಸೃಷ್ಟಿಯ ಕಾಲಚಕ್ರದಲ್ಲಿ ಹೆಣ್ಣು ಮತ್ತು ಗಂಡುಗಳ ಮಿಲನ ಎಷ್ಟು ಮುಖ್ಯವೋ, ಪ್ರೀತಿ ಪ್ರೇಮವೂ ಕೂಡಾ ಅಷ್ಟೇ ಮುಖ್ಯವಾದದ್ದು. ಪ್ರೀತಿಪ್ರೇಮವಿದ್ದಾಗ ಮಾತ್ರ ಅಲ್ಲಿ ಹೆಣ್ಣು ಮತ್ತು ಗಂಡುಗಳ ಸಮ್ಮಿಲನ ಸಾಧ್ಯ.

*'ಇಂದ್ರಿಯ ನಿಗ್ರಹ ಮಾಡಿದರೆ ಹೊಂದುವುವು*
*ದೋಷಂಗಳು;*
*ಮುಂದೆ ಬಂದು ಕಾಡುವುವು ಪಂಚೇಂದ್ರಿಗಳು,*
*ಸತಿಪತಿರತಿಸುಖವ ಬಿಟ್ಟರೆ*
*ಸಿರಿಯಾಳ ಚಂಗಳೆಯರು? ಸತಿಪತಿರತಿಸುಖ*
*ಭೋಗೋಪಭೋಗವ ಬಿಟ್ಟನೆ*
*ಸಿಂದುಬಲ್ಲಾಳನು? ನಿಮ್ಮ ಮುಟ್ಟಿ, ಪರಧನಪರಸ್ತ್ರೀ*
*ಗೆಳಸಿ ದಡೆ ನಿಮ್ಮ ಚರಣಕ್ಕೆ ದೂರ,*
*ಕೂಡಲಸಂಗಮದೇವಾ"*

ಷಡ್‌ರಸ ಯುಕ್ತವಾದ ಆಹಾರವನ್ನು ಸೇವಿಸುವ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಕಾಮ, ಕ್ರೋಧ, ಲೋಭ, ಮೋಹ, ಮತ್ಸರಗಳು ಸಹಜವಾಗಿ ಇರಲೇಬೇಕು. ಆದರೆ ಆಸೆಯೆಂಬ ವೇಶಿಯನ್ನು ಬೆನ್ನು ಹತ್ತದೆ, ಅನೇಕ ದುಶ್ಚಟ ದುರಾಚಾರಕ್ಕೆ ಬಲಿಯಾಗದೆ, ಜೀವನದಲ್ಲಿ ಜಿಗುಪ್ಸೆಗೊಳ್ಳದೆ 'ಉಂಡು ಉಪವಾಸಿ ಬಳಸಿ ಬ್ರಹ್ಮಚಾರಿ'ಯಾಗಿ ಸಂಸಾರವೆಂಬ ಬಂಡಿಯನ್ನು ನಡೆಸಿಕೊಂಡು ಹೋಗಬೇಕು. ಕಚ್ಚೆ ಕೈ ಬಾಯಿಗಳನ್ನು ನಮ್ಮ ಹತೋಟಿಯಲ್ಲಿ ಇಟ್ಟುಕೊಂಡು ಎಲ್ಲೆಂದರಲ್ಲಿ ಮನವೆಳಸದೆ ಅನಾಚಾರದಲ್ಲಿ ತೊಡಗದೇ ಅದರಿಂದಾಗುವ ಪರಿಣಾಮಗಳನ್ನು ಅರಿತು ಇಂದ್ರಿಯಗಳ ಸದ್ವಿನಿಯೋಗದಿಂದ ಪರಮಸುಖಿಯಾಗಿ ಬದುಕಬೇಕೆಂಬುದೆ ಶರಣರ ನಿಲವು.

'ಗಂಡ ಶಿವಲಿಂಗದೇವರ ಭಕ್ತ ಹೆಂಡತಿ ಮಾರಿ
ಮಸಣೆಯ ಭಕ್ತೆ
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆ ಮಾಂಸ
ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊರಗೆ ತೊಳೆದಂತೆ
ಕೂಡಲಸಂಗಮದೇವ'

ಶರಣರ ನೇರ ನುಡಿಗಳು ನಮ್ಮ ಮನಸ್ಸನ್ನು ಹೊಕ್ಕು ಕಶ್ಮಲಗಳನ್ನು ಹೊರಹಾಕಿ ಶುದ್ಧ ಬದುಕನ್ನು ರೂಪಿಸುತ್ತವೆ. ಎನ್ನುವುದಕ್ಕೆ ಮೇಲಿನ ವಚನದಲ್ಲಿ, ಸತಿಪತಿಗಳ ದ್ವಂದ್ವ ನೀತಿಯ ಆಚರಣೆಯ ಬಗ್ಗೆ ಸಂಕ್ಷಿಪ್ತವಾಗಿ ವಿಶಾಲ ಅರ್ಥದಲ್ಲಿ ತಿಳಿಸಿದ್ದಾರೆ. 'ಎತ್ತು ಏರಿಗೆಳೆದರೆ ಕೋಣ ನೀರಿಗಿಳಿಯಿತು' ಎನ್ನುವ ನಾಣ್ನುಡಿಯಂತೆ, ಗಂಡಸು ಸತ್ಯಸದಾಚಾರಿಯಾಗಿ ಹೆಂಡತಿಯು ವ್ಯಭಿಚಾರಿಣಿಯಾಗಿದ್ದರೆ, ಅಂಥವರು ಸಲ್ಲಿಸುವ ಸೇವೆ ವ್ಯರ್ಥ, ಮನಸ್ಸಿನಲ್ಲಿ ಹೆಂಡದ ಹಾಗೆ ಹೊಲಸನ್ನು ತುಂಬಿಕೊಂಡು ಹೊರಗೆ ಢಾಂಬಿಕದಿಂದ ಮೆರೆಯುವ ಸಂಸಾರಿಗಳನ್ನು ಅಜ್ಞಾನಿಗಳೆಂದು ನಿಂದಿಸಿದ್ದಾರೆ. ಅಲ್ಲದೇ ಸಂಸಾರದಲ್ಲಿ ಹೊಡೆದಾಡಿ ವ್ಯರ್ಥ ಕಾಲಹರಣ ಮಾಡುವವರ ಬಾಳ್ವೆ, ನಾಯಿ, ಹಂದಿಗಿಂತಲೂ ಕಡೆ ಎಂದು ಕಟುವಾಗಿ ಟೀಕಿಸಿದ್ದಾರೆ ನಮ್ಮ ಶರಣರು. ಆದ್ದರಿಂದ ಸತಿಪತಿಗಳಿಬ್ಬರೂ ಅರ್ಥೈಸಿಕೊಂಡು ಬಾಳಿದರೆ ಅದೇ ಸ್ವರ್ಗ ಇಲ್ಲದಿದ್ದರೆ ನಾಯಕನರಕ. ಸಂಸಾರವೆಂಬ ಬಿರುಗಾಳಿಗೆ ಸಿಕ್ಕು ನರಳಿನರಳಿ ಕೊರಗುವ ಮುನ್ನ, ಕೊರಗಿಕೊರಗಿ ಸಾಯುವ ಮುನ್ನ ಪರುಷಮಣಿ ಎಂಬ ಶರಣರ ವಚನಗಳ ಮುಟ್ಟಿ, ಕೇಳಿ, ಆಚರಿಸಿ ಆನಂದಿಸಬೇಕಾದುದೇ ನಿಜಜೀವನದ ಮುಕ್ತಿ, ಇಂದು ಮನುಷ್ಯನ ಅಂತರಂಗದ ಹೀನ ಕೃತ್ಯಗಳನ್ನು ಬಹಿರಂಗದಲ್ಲಿ, ಆತ್ಮಹತ್ಯೆ, ಅತ್ಯಾಚಾರ, ವರದಕ್ಷಿಣೆ, ಕೊಲೆ, ಸುಲಿಗೆ, ಇನ್ನೂ ಅನೇಕಾನೇಕ ರೂಪಗಳಲ್ಲಿ ನಮ್ಮ ಕಣ್ಣು ಮುಂದೆಯೇ ಕಾಣುತ್ತಿದ್ದೇವೆ. ಇದರಿಂದ ಮನುಷ್ಯನ ಮನಸ್ಸು ಎಷ್ಟೊಂದು ಕಲ್ಮಷವಾಗಿದೆ ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ, ಇದಕ್ಕೆಲ್ಲ ಕಾರಣ ನಮ್ಮ ಜೀವನದ ಗುರಿಯನ್ನು ನಾವು ಸರಿಯಾಗಿ ಅರ್ಥೈಸಿಕೊಂಡಿಲ್ಲವೆಂದೇ ಅರ್ಥ, ಪ್ರತಿಯೊಬ್ಬ ಮಾನವನ ಪರಮಗುರಿ ಮೋಕ್ಷ ಸಂಪಾದನೆ ಎನ್ನುವುದನ್ನು ನಾವು ಮರೆತಿದ್ದೇವೆ. ಹಣ, ಐಶ್ವರ್ಯ, ಅಂತಸ್ತುಗಳ ಬೆನ್ನುಹತ್ತಿ ಕೊನೆಯಲ್ಲಿ ನಮ್ಮ ಕಷ್ಟಗಳಿಗೆ ನಾವೇ ಗುರಿಯಾಗುತ್ತೇವೆ. ಉದಾ: ತಂದೆಯೊಬ್ಬ ತನ್ನ ಸಾಮರ್ಥ್ಯದಿಂದ ಸಕಲ





ಐಶ್ವರ್ಯವನ್ನು ಗಳಿಸಿ ಕೊನೆಯ ಕಾಲದಲ್ಲಿ ಅದೇ ಐಶ್ವರ್ಯದಿಂದ ತನ್ನ ಮಗನ ಅವನತಿಯನ್ನು ಅನೇಕ ದುಷ್ಕೃತ್ಯಗಳಲ್ಲಿ ಕಾಣುತ್ತಾನೆ. ಆ ನೋವನ್ನು ಸಹಿಸಲಾರದೇ, ತಾನು ಗಳಿಸಿದ ಸಂಪತ್ತು ತನಗೆ ಮೃತ್ಯುವಾಯಿತು ಎಂದು ಕೊಳ್ಳುತ್ತಾನೆ. ಅದಕ್ಕಾಗಿ ಜೀವನದಲ್ಲಿ ಸಕಲ ಐಶ್ವರ್ಯಕ್ಕಿಂತಲೂ ಸತ್ಯಸದಾಚಾರ, ಸಂಸ್ಕಾರಗಳೇ ಮುಖ್ಯ. ಅದನ್ನು ನಾವು ಶರಣರ ವಚನದಲ್ಲಿ ಕಂಡುಕೊಳ್ಳೋಣ ಪಾಲಿಸೋಣ.

*ಹೊತ್ತುಹೋಗದ ಮುನ್ನ ಮೃತ್ಯುಬಾರದ ಮುನ್ನ...*
*ಯೌವನ ಕಳೆದು ಹೋಗುವ ಮುನ್ನ*
*ದುಷ್ಟಟ ದುರಾಚಾರಕ್ಕೆ ಬಲಿಯಾಗುವ ಮುನ್ನ*
*ನಾನಾ ರೋಗಗಳಿಗೆ ಈಡಾಗಿ ಬಳಲುವ ಮುನ್ನ*
*ಕಾಲಮೇಲೆ ಕೈಯನ್ನೂರಿ ಮುಪ್ಪು ಬರುವ ಮುನ್ನ*
*ಸಾವು ಬಂದು ಕರೆಯುವ ಮುನ್ನ*
*ಇನ್ನಾದರೂ ಸುಧಾರಿಸಿಕೊಳ್ಳೋಣವೇ!*

'ಶಿವಶಿವ ತಾನಾರೆಂಬುದನರಿಯದೆ, ತಮ್ಮ ನಿಜವ ಮರೆದು ಈ ಮರುಳು ಮಾನವರು ಕೆಟ್ಟಕೇಡ ಪೇಳ್ವೆ, ಬಲ್ಲರೆ ಹೇಳಿರಿ ಅರಿಯದಿದ್ದರೆ ಕೇಳಿರಿ, ಆನೆ ಮೊದಲು ಇರುವೆ ಕಡೆಯಾಗಿ ಒಂದೊಂದು ಜನ್ಮದಲ್ಲಿ ಸಹಸ್ರವೇಳೆಸತ್ತು, ಸಹಸ್ರವೇಳೆ ಹುಟ್ಟಿ, ತೊಡದ ಚೋಹವತೊಟ್ಟು, ಮೆಟ್ಟದ ಭೂಮಿಯ ಮೆಟ್ಟಿ, ಉಣ್ಣದ ಆಹಾರವನುಂಡು ಭವಭವದಲ್ಲಿ ಘಾಸಿಯಾಗಿ ಕಡೆಯಲ್ಲಿ ಮನುಷ್ಯ ದೇಹವ ತಾಳಿದಲ್ಲಿ, ವಾತ ಪಿತ್ತ ಶ್ಲೇಷ್ಮ ಮೊದಲಾದ ಮೂನ್ನೂರರವತ್ತು ರೋಗಾದಿ ಬಾಧೆಗಳಿಂದ ಕಂದಿ ಕುಂದಿ ನೊಂದು ಬೆಂದು ತಾಪತ್ರಯಾಗ್ನಿಯಿಂದ ದಗ್ಧವಾದ ದುಃಖವ ಪೇಳಲಿಕ್ಕೆ ಸಹಸ್ರಹೆಡೆಯ ಶೇಷಂಗೆ ಎರಡು ಸಹಸ್ರ ಜಿಹ್ವೆಯಿಂದ ಪೇಳಲಿಕ್ಕೆ ಆಗಮ್ಯ ಅಗೋಚರ. ಇಂತಿದನು ಕಂಡು ಕೇಳಿ ಮೈಮರೆದು ದೇಹೋಹಂ ಎಂದು ಮೃತ್ಯುಲೋಕದ ಅನಿತ್ಯಬೋಗಂಗಗಳ ಮೆಚ್ಚಿ ಈ ಮಾಯಾಸಂಸಾರದ ವಿಷಯಸುಖ ಬಹುಸವಿಯೆಂದು ತಲೆತೂಗಿ, ಹೊಡೆದಾಡಿ ಹೊತ್ತುಗಳೆದು ಹೇಸಿಕೆ ಸಂಸಾರದಲ್ಲಿ ಸಿಲುಕಿ ಸತ್ತುಹೋಗುವ ಹೇಸಿ ಮೂಳ ಹೊಲೆ ಮಾದಿಗರಿಗೆ ಶಿವಪಥ ಎಂದೆಂದಿಗೂ ಸಾಧ್ಯವಿಲ್ಲ; ಅಸಾಧ್ಯವೆಂದಾತ ನಿಮ್ಮ ಶರಣ ವೀರಾಧಿವೀರ ಕಾಡಿನೊಳಗಾದ ಶಂಕರ ಪ್ರಿಯ ಚೆನ್ನಕದಂಬಲಿಂಗ ನಿರ್ಮಾಯ ಪ್ರಭುವೇ'

ಸೃಷ್ಟಿಯ ಲೀಲೆಯನ್ನು ಈ ಕೆಳಗಿನ ಒಂದೇ ಒಂದು ವಚನದಲ್ಲಿ ಸ್ಪಷ್ಟವಾಗಿ ನಿಖರವಾಗಿ, ಯಥಾವತ್ತಾಗಿ ಹೇಳಿರುವಂತಹ ವೀರ ವೈರಾಗ್ಯನಿಧಿ ಶರಣೆ ಅಕ್ಕ ಮಹಾದೇವಿಯ ಪಾದಗಳಿಗೆ ಮೊದಲು ದೀರ್ಘದಂಡ ಪ್ರಣಾಮಗಳನ್ನು ಅರ್ಪಿಸುತ್ತಾ–

*'ಸಂಗದಿಂದಲ್ಲದೆ ಅಗ್ನಿ ಹುಟ್ಟದು*
*ಸಂಗದಿಂದಲ್ಲದೆ ಬೀಜ ಮೊಳೆದೋರದು*
*ಸಂಗದಿಂದಲ್ಲದೆ ಹೂವಾಗದು*
*ಸಂಗದಿಂದಲ್ಲದೆ ದೇಹವಾಗದು*
*ಸಂಗದಿಂದಲ್ಲದೆ ಸರ್ವಸುಖದೋರದು*
*ಚೆನ್ನಮಲ್ಲಿಕಾರ್ಜುನಯಾ ನಿಮ್ಮ ಅನುಭಾವಿಗಳ*
*ಸಂಗದಿಂದ ನಾನು ಪರಮಸುಖಿಯಾದೆನಯ್ಯಾ ಪ್ರಭುವೆ'*

ಸಂಗದಿಂದಲ್ಲದೆ ಅಗ್ನಿ ಹುಟ್ಟದು' (There is no fire without Fusion) ನ್ಯೂಕ್ಲಿಯರನ ಬಾಂಬ್ ತಯಾರಾಗಲು ಮತ್ತು ಸ್ಫೋಟಿಸಲು ನ್ಯೂಕ್ಲಿಯರ್ ಫ್ಯೂಜನ್ & ನ್ಯೂಕ್ಲಿಯರ್ ಫಿಶನ್ ಎಂಬ ಕ್ರಿಯೆಗಳು ಅವಶ್ಯ. ಅದನ್ನು ಶರಣೆ ಅಕ್ಕ ಮಹಾದೇವಿ ಎಂದೋ ಹೇಳಿದ್ದಾಳೆ. ನಾವು ಅರ್ಥೈಸಿಕೊಳ್ಳಬೇಕಾಗಿದೆ ಅಷ್ಟೆ. ಇಂದು ನಾವು ನ್ಯೂಕ್ಲಿಯರ್ ಬಾಂಬ್ ಕಂಡು ಹಿಡಿದು ದೊಡ್ಡ ಸಾಧನೆಯನ್ನೇನೋ ಮಾಡಿದ್ದೇವೆ ನಿಜ. ಆದರೆ ಜಗತ್ತೆಲ್ಲವೂ ಜೀವಮಯ ಆಗಿರುವುದರಿಂದ ಬರೀ ಮನುಷ್ಯನಷ್ಟೇ ಅಲ್ಲದೆ ಅವನ ಸುತ್ತಮುತ್ತಲು ಕಾಣುವ ಮತ್ತು ಕಾಣದಿರುವ ಜೀವಜಾಲವು ಅವನಿಗೆ ಸಹಾಯಕವಾಗಿರುವ ಕಾರಣ, ಆ ಜೀವಕುಲ ನಾಶಕ್ಕೆ ನಾವು ಕಾರಣರಾಗಬೇಕಾದ ಪರಿಸ್ಥಿತಿ ಬಂದೊದಗಿದೆ, ಇನ್ನಾದರೂ ಎಚ್ಚೆತ್ತುಕೊಳ್ಳೋಣ. 'ಸಂಗದಿಂದಲ್ಲದೆ ಬೀಜಮೊಳೆದೋರದು' (The seed can't be grow alone without the fusion of soil and water) 'ಸಂಗದಿದ್ದಲ್ಲದೆ ಹೂವಾಗದು. (There is no flower without fusion of sun rays and climate etc.,) 'ಸಂಗದಿಂದಲ್ಲದೇ ಸರ್ವ ಸುಖದೋರದು' (There is no happiness without the fusion of mind (ಮನ)and others)

ಒಂದಕ್ಕೊಂದು ಕೂಡಿದಾಗ ಮಾತ್ರ ಇನ್ನೊಂದು ಉತ್ಪತ್ತಿಯಾಗಲು ಸಾಧ್ಯ ಎಂಬ ಮಾತನ್ನು ವಿಶಾಲ ದೃಷ್ಟಿಯಿಂದ ಅರ್ಥೈಸಿಕೊಂಡಾಗ ನಮಗೆ ಸಂಪೂರ್ಣ ಜ್ಞಾನವಾಗುವುದರಲ್ಲಿ ಎರಡು ಮಾತಿಲ್ಲ. ಆದ್ದರಿಂದ ತ್ರಿಕಾಲ ಜ್ಞಾನಿಗಳಾದ ಶರಣರು ಲಿಂಗಪೂಜೆಯ ಅವಶ್ಯಕತೆಯನ್ನು ತಿಳಿಸಿದ್ದಾರೆ. ತದೇಕ ಚಿತ್ತದಿಂದ ಲಿಂಗವನ್ನು ದೃಷ್ಟಿಸಿದಾಗ (ಶರಣಸತಿ ಲಿಂಗಪತಿಯಾದಾಗ) ನಮ್ಮಲ್ಲಿ ಆಗುವ ಬದಲಾವಣೆಗಳನ್ನು ನಾವೇ ಕಾಲಾಂತರದಲ್ಲಿ ಕಾಣುತ್ತೇವೆ. (The fusion of Linga and sight is the formation of good human beings)

'ಅಂಗೈಯ ಲಿಂಗವ ಕಂಗಳು ತುಂಬಿ ನೋಡಿ ಮನ ಹಾರೈಸಿದಲ್ಲಿ ಅಂಗೇಂದ್ರಿಯಂಗಳೆಲ್ಲ ಲಿಂಗೇಂದ್ರಿಯಗಳಾದವು.

ಅಂಜದಿರು ಮನವೆ ಲಿಂಗವೆ ನಿನಗೆ ದೂರವೆಂದು ಮನೋಮಧ್ಯದೊಳಿಪ್ಪ, ಅಂಗದ ಕಂಗಳಲ್ಲಿಪ್ಪ, ಭಾವದ ಪ್ರಾಣದಲ್ಲಿಪ್ಪ, ಅಂಗಪ್ರಾಣಭಾವ ಸರ್ವಾಂಗ ಲಿಂಗವಾದ ಅಂಗಪ್ರಾಣಭಾವ ಸರ್ವಾಂಗಲಿಂಗವಾದ ಬಲಿಕ, ಲಿಂಗ ಮಧ್ಯೆ ಪ್ರಾಣ, ಪ್ರಾಣ ಮಧ್ಯೆ ಲಿಂಗ, ಉತ್ಪತ್ತಿಸ್ಥಿತಿ ಲಯವಿಲ್ಲ ವಾಗಿ ಲಿಂಗದಿಂದ'ಜನಿಸಿ, ಲಿಂಗೇಂದ್ರಿಯ ಲಿಂಗ ಜ್ಞಾನದಲ್ಲಿ ವರ್ತಿಸಿ, ದ್ವೈತಾದ್ವೈತವಿಲ್ಲವಾಗಿ ಬಂದುದೇ ಲಿಂಗದಲೀಲೆ, ಇದ್ದುದೇ ಲಿಂಗದ ಆನಂದವು, ಮನೋಲಯವೇ ಲಿಂಗದ ನಿರವಯವು, ಇದು ಸತ್ಯ, ಶಿವಬಲ್ಲ ಶಿವನಾಣೆ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ'.

ಅತ್ಯಮೂಲ್ಯವಾದ ಸಮಯವನ್ನು ಮಾಯೆಯ ಬಲೆಯಲ್ಲಿ ಸಿಲುಕಿ ವ್ಯರ್ಥ ಮಾಡಿಕೊಂಡು ಹೋಗುವ ಜನರು ಒಂದು ಬದಿಯಾದರೆ, ಸತ್ಯವೆಂಬ ಕೊರಲಗನೇ ಹಿಡಿದುಕೊಂಡು ಆದರ್ಶವಾದಿಗಳಾಗಿ ಬದುಕುವ ಜನ ಇನ್ನೊಂದು ಕಡೆ, ಇದೇ ಸೃಷ್ಟಿಯ ನಿಯಮ, ಆದರೆ ಶರಣರು ಕಂಡ ಕನಸು, ಹಿರಿಯರು ಕಂಡ ಕನಸುಗಳು ನನಸಾಗಬೇಕಾದರೆ ನಾವು ಶರಣ ಮಾರ್ಗವನ್ನು ಅನುಸರಿಸಲೇಬೇಕು. 'ತುಂಬಾ ಸರಳ ಮತ್ತು ವಿಶಾಲ ವೈಚಾರಿಕತೆಯನ್ನು ಹೊಂದಿರುವಂಥ ನಮ್ಮ ಶರಣರ ಹಾದಿ ಸರ್ವರಿಗೂ ಸುಲಲಿತ. ಅದನ್ನು ನಾವು ಮೈಗೂಡಿಸಿ ಕೊಂಡು ನಮ್ಮ ಸಾಂಸಾರಿಕ ಬದುಕಿನಲ್ಲಿ ಆದರ್ಶ ಜೀವನ ನಡೆಸಿ ಯಶಸ್ಸನ್ನು ಕಾಣಬೇಕೆಂಬುದೇ ನಮ್ಮೆಲ್ಲರ ಬಯಕೆ; ಕೆಸರೊಳಗಣ ತಾವರೆಯಂತೆ ಮರದೊಳಗಣ ಬಯಲಿ ನಂತೆ ಸಂಸಾರದೊಳಗೆ ಇದ್ದೂ ಇಲ್ಲದಂತೆ ಇರಬೇಕು' ಅದಕ್ಕಾಗಿ ಯುವ ದಂಪತಿಗಳು ಆದಷ್ಟು ಶರಣರ ವಚನಗಳ ಪಾಲನೆಗೆ ಹೆಚ್ಚಿನ ಗಮನ ನೀಡಬೇಕಾಗಿ ತಮ್ಮಲ್ಲಿ ಹೃದಯ ಪೂರ್ವಕ ವಿನಂತಿ.

*

**'ಸಿದ್ಧಗಂಗಾ ಆಜೀವ ಸದಸ್ಯರಲ್ಲಿ ಮನವಿ**

ನಿಮ್ಮ ವಿಳಾಸ ಬದಲಾದಾಗ ವಿಳಾಸದಲ್ಲಿರುವ ನಂಬರ್ ತಪ್ಪದೆ ಸೂಚಿಸಿ. ಈ ಕೆಳಗಿನ ವಿಳಾಸಕ್ಕೆ ಪತ್ರ ಬರೆಯಿರಿ.

ಈ ನಂಬರ್ ಪ್ರತಿಗಳನ್ನು ರವಾನಿಸುವ ಕವರ್ ಮೇಲೆ ಇರುವ ನಿಮ್ಮ ವಿಳಾಸದಲ್ಲಿರುವುದು. ಈ ನಂಬರ್ ಸ್ಥಿರ ನೆನಪಿನಲ್ಲಿಡಿ.

**ಪ್ರಕಾಶಕರು,**
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು- 572 104.

## ಗೆಳೆತನ

ಜೀವನದ ಪ್ರತಿ ಹಂತ ಹಂತಗಳಲ್ಲಿಯೂ ಸುಖ ದುಃಖ ಶಾಂತಿಯನ್ನು ಹೃದಯದಿಂದ ಇನ್ನೊಂದು ಹೃದಯಕ್ಕೆ ಒಂದು ಮನಸ್ಸು ಹಗುರವಾಗುವುದು. ಅದೇ ರೀತಿ ತಮ್ಮ ತಮ್ಮ ವಿಷಯ ತಿಳಿದುಕೊಂಡಾಗ ಹಲವಾರು ವಿಷಯಗಳು ಮನದಟ್ಟಾಗುವುದು.

ಮನಸ್ಸು ಎಂಬುದು ತುಂಬಾ ಚಂಚಲವಾದ ವಸ್ತು. ಹರಿಬಿಟ್ಟರೆ ಹರಿಯುತ್ತಾ ಹೋಗುವುದು. ನಿಲ್ಲಿಸಿದರೆ ಏನಾದರೊಂದು ಸಾಧಿಸಬಹುದು. ಹೀಗೆ ಹೇಳುವಂತೆ ಮನಸ್ಸು ತನ್ನ ವಿಷಯಗಳನ್ನೆಲ್ಲಾ ಪ್ರೀತಿ ಪ್ರೇಮ ಸಿಟ್ಟು ಇನ್ನಿತರ ಭಾವನೆಗಳಲ್ಲಿ ವ್ಯಕ್ತವಾದರೂ ಕೂಡ ಜೀವನ ಸವಿನೆನಪುಗಳಲ್ಲಾಗಲಿ ದುಃಖವನ್ನಾಗಲಿ, ಸಹಾಯ ಅಪೇಕ್ಷಿಸುವುದಾಗಲಿ, ಒಟ್ಟಿಗೆ ಎಲ್ಲಾ ರೀತಿಯಿಂದ ಮನುಷ್ಯ ಇತರರ ಗೆಳೆತನವನ್ನು ಅಪೇಕ್ಷಿಸುವನು. ಮನಸ್ಸೇ ಹೀಗೆ ಎಲ್ಲಿಂದಾದರೂ ಗೆಳೆತನದ ಬಾಗಿಲನ್ನು ತಟ್ಟಿ ಗೆಳೆತನವನ್ನು ಬಯಸುವುದು. ಚಿಕ್ಕಂದಿನಿಂದ ಹಿಡಿದು ಮರಣ ಹೊಂದುವವರೆಗೂ ಗೆಳೆತನ ಶಾಶ್ವತವೂ ಇರಬಹುದು. ಅಶಾಶ್ವತವು ಇರಬಹುದು.

ನಿಜವಾದ ಗೆಳೆತನದಲ್ಲಿ ಯಾವುದೇ ರೀತಿಯ ಹಣ, ಅಂತಸ್ತು, ಮೇಲು-ಕೀಳು ಎಂಬುದು ಬರುವುದೇ ಇಲ್ಲ. ಇಂಥ ವಿಷಯ ಬಂದರೆ ಗೆಳೆತನ ಎನಿಸಿಕೊಳ್ಳಲಾರದು. ಗೆಳೆತನ ಎಂಬುದು ವಿಶ್ವಾಸದ ಭೂಮಿ. ಇಂಥ ಒಂದು ವಿಶ್ವಾಸದ ಭೂಮಿಯಲ್ಲಿ ಗೆಳೆತನದ ಪೈರು, ಸುಭದ್ರವಾಗಿ ನೆಡಲು ಗುಣಗಳು ಒಳ್ಳೆಯ ರೀತಿಯದ್ದಾಗಿರಬೇಕು, ಹವ್ಯಾಸಗಳು ಕೂಡ ಅಷ್ಟೇ ಮಹತ್ವದ ಪಾತ್ರವನ್ನು ವಹಿಸುತ್ತವೆ.

'ಏನೇ ಆದರೂ ಗೆಳೆಯ ಅಥವಾ ಗೆಳತಿ ಒಂದರ್ಥ ದಲ್ಲಿ ಪತಿ ಅಥವಾ ಪತ್ನಿಗಿಂತಲೂ ಮಿಗಿಲು, ಗೆಳೆತನ ಎನ್ನುವುದು ವಿಶ್ವಾಸದ ಭೂಮಿ, ಕಷ್ಟ ಸುಖಗಳನ್ನು ಹೇಳಿಕೊಂಡು ಹಂಚಿಕೊಂಡು ಎದೆಯನ್ನು ಹಗುರ ಮಾಡಿಕೊಳ್ಳುವ ಸಾಧನ. ಮಾರ್ಗದರ್ಶಕ ಸತ್ತ್ವ ಪ್ರಿಯಕ್ಕಿಂತ ಹೆಚ್ಚಾಗಿ ಹಿತದ ನೆಲೆ ಗೆಳೆತನ. ಮುಖ್ಯವಾಗಿ ಗೆಳೆತನದಲ್ಲಿ ಮನುಷ್ಯ ತಿಳಿದುಕೊಂಡಿರಬೇಕಾದದ್ದು ಇದು. 'ನಿಷ್ಠಾವಂತ ಸ್ನೇಹಿತ ಬದುಕಿನ ದಿವ್ಯೌಷಧ.

-ಶ್ರೀಮತಿ ಶೋಭಾ ಎಸ್. ಕೋಟಿ
ಹುನಗುಂದ ತಾ., ಬಾಗಲಕೋಟೆ ಜಿಲ್ಲೆ,





## ಹಿಡಿಯುವಷ್ಟು 'ಸುಖ'ವಿಲ್ಲ ಬಿಡುವಷ್ಟು 'ದುಃಖ'ವಿಲ್ಲ

- ಡಾ॥ ರಾಜಶೇಖರ ಜಮದಂಡಿ, ನ್ಯಾಷನಲ್ ಪ.ಪೂ. ಕಾಲೇಜು, ಹರಿಹರ ರಸ್ತೆ, ಹೊಸಪೇಟೆ-583 201.

ಸುಖಾನುಭವವಿಲ್ಲದೆ ದುಃಖಾನುಭವವೂ, ದುಃಖಾ ನುಭವವಿಲ್ಲದೆ ಸುಖಾನುಭವವೂ ಆಗದಿರುವುದರಿಂದ ಅವೆರಡು ವಿಕಾರಗಳೂ ಕ್ಷಣಿಕಗಳಾಗಿ ಸಂಸಾರದಲ್ಲಿ ಮನುಷ್ಯನನ್ನು ಆಗಾಗ್ಗೆ ತಡೆ ಹಾಕುತ್ತಾ ಗಾಸಿ ಮಾಡು ತ್ತಿರುತ್ತವೆ. ಮನುಷ್ಯನ ಭವಿಷ್ಯ ಯಾರು ತಾನೆ ಬಲ್ಲರು? ಸುಖ ದುಃಖಗಳು ಹಿಂದು-ಮುಂದಾಗಿ ಬಂದಾಗಲೂ ಅದನ್ನು ಎದುರಿಸಲೇಬೇಕಲ್ಲವೇ? ಜೀವನದಲ್ಲಿ ಈ ಏರಿಳಿತ ಇದ್ದೇ ಇರಬೇಕು. ಅದೇ ಮನುಷ್ಯನನ್ನು ಪಳಗಿಸುವ ಸಾಧನೆ ಅಥವಾ ಪ್ರಪಾತ. ಅದರಲ್ಲಿ ಬಿದ್ದು ಎದ್ದರೇನೇ ಬಾಳನ್ನು ಗೆದ್ದಂತೆ.

ಸೃಷ್ಟಿಯಲ್ಲಿ ಕರ್ಮಫಲಗಳೆರಡು ; ಒಂದು ಸುಖ, ಇನ್ನೊಂದು ದುಃಖ, ಇದನ್ನೇ ಬಸವಣ್ಣನವರು ವಚನದಲ್ಲಿ

*ಸುಖ ಬಂದರೆ ಪುಣ್ಯದ ಫಲವೆನ್ನನು*
*'ದುಃಖ ಬಂದರೆ ಪಾಪದ ಫಲವೆನ್ನನು*
*ನೀ ಮಾಡಿದೊಡಾಯಿತ್ತೆಂದೆನ್ನೆನು*
*ಕರ್ಮಕ್ಕೆ ಕರ್ತೃವೇ ಕಡೆಯೆಂದೆನ್ನೆನು*
*ಕೂಡಲಸಂಗಮದೇವಾ ....*

ಎಂದಿದ್ದಾರೆ. ಅಂದರೆ ಸುಖ-ದುಃಖ ಪಡುವುದು ಅವರವರ ಕೈಯಲ್ಲೇ ಇರುತ್ತದೆ. ಇವು ಆತ್ಮವಿಶ್ವಾಸಕ್ಕೆ ಅಡಚಣೆಯನ್ನೊಡ್ಡುವ ಹಿತಶತ್ರುಗಳಾಗಿದ್ದರೂ ಅವುಗಳ ಸ್ನೇಹ ಬಿಡಲಾಗದು. ಸುಖವೆನ್ನುವುದು ವೈಯಕ್ತಿಕ ಅಪೇಕ್ಷೆ ಗಳ ತಣಿವನ್ನು ಗುರಿಯಾಗಿಸಿಕೊಂಡದ್ದು, ಸಿಕ್ಕಷ್ಟೂ ಇನ್ನೂ ಬೇಕು- ಇನ್ನೂ ಬೇಕೆಂಬ ನೀರಡಿಕೆಯನ್ನು ಹುಟ್ಟಿಸತಕ್ಕದ್ದು.

*ಹುಟ್ಟುವಾಗಲೂ ದುಃಖ ಬೆಳೆಯುವಾಗಲೂ ದುಃಖ*
*ಕಟ್ಟಕಡೆಗೆ ಮರಣ ದುಃಖವೊಂದು*
*ನರನ ದುಃಖದಂತೆ ಬೇರೆ ದುಃಖವಿಲ್ಲ*
*ವಿಶ್ವತೋಭಿರಾಮ ಕೇಳುವೇಮ*

ಹೀಗೆ ಹುಟ್ಟು ಸಾವುಗಳ ಮಧ್ಯೆ ಮಾನವನ ಬದುಕು ದುಃಖಮಯವಾಗಿದೆ. ಇವು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. 'ಸಾಸಿವೆ ಕಾಳಿನಷ್ಟು ಸುಖಕ್ಕೆ ಸಾಗರದಷ್ಟು ದುಃಖ' ಅನುಭವಿಸಬೇಕಾದುದೆ. ಹಾಗಂತ ದುಃಖಗಳಿವೆಯೆಂದು ಪಲಾಯನವಾದಿಯಾಗಿ ಬಾಳಲಾಗದು. ಹಾಗೆಯೇ ಸುಖವೆನ್ನುವುದು ಭೌತಿಕ ವಸ್ತುಗಳಲ್ಲಿಲ್ಲ. ಕಸ್ತೂರಿಮೃಗ ತನ್ನ ನಾಭಿಯಿಂದಲೇ ಪರಿಮಳ ಸೂಸುವುದನ್ನರಿಯದೇ ಅದರ ಮೂಲವನ್ನು ಹುಡುಕುತ್ತಾ ಕಾಡೆಲ್ಲಾ ಅಲೆಯುವಂತೆ. ನಾವು ನಮ್ಮೊಳಗಿರುವ ಸುಖದ ನೆಲೆಯನ್ನು ಅರಿಯದೇ ಹೊರ ಜಗತ್ತಿನ ವಸ್ತು. ವಿದ್ಯಾಮಾನಗಳಲ್ಲಿ ಹುಡುಕುತ್ತಿದ್ದೇವೆ. ಇದನ್ನೇ ಕುವೆಂಪು ತಮ್ಮ 'ಶತಮಾನದ ಸಂಧ್ಯೆ' ಎಂಬ ಕವನದಲ್ಲಿ ಹೇಳಿದಂತೆ

ನೊಣ ಮೀಸೆಯ ಹುಳು ಹೆಜ್ಜೆಯ
ಎಣಿಸುವ ಬಿಜ್ಜೆಯ ಬಲ್ಲ.
ತನ್ನಾತ್ಮವ ತಾನರಿಯುವ
ಸಾಧನೆಯೊಂದು ಒಲ್ಲ,
ಅನ್ವೇಷಣೆ - ಅನ್ವೇಷಣೆ
ಸುಖಿಸಲು ಪುರುಸೊತ್ತಿಲ್ಲ ।
ತಿಳಿದೂ ತಿಳಿದೂ ತಿಳಿದೂ
ಕೊನೆಗೇನೂ ಗೊತ್ತಿಲ್ಲ ।

ನೊಬೆಲ್ ಪ್ರಶಸ್ತಿ ವಿಜೇತ ವಿಜ್ಞಾನಿ ಅಲೆಕ್ಸಿಸ್ ಕೆರೆಲ್‌ರ್ ಮಾತುಗಳನ್ನು ನೋಡಿದಾಗ 'ಬಾಳಿನಲ್ಲಿ ನಿಜವಾದ ಸುಖ-ಶಾಂತಿ ಆನಂದ ನೆಮ್ಮದಿಗಳೆಲ್ಲಾ ಬಾಹ್ಯ ಪ್ರಕೃತಿಯ ವಿಕಾಸದಿಂದಲ್ಲ, ಆಂತರಿಕ ಪ್ರಕೃತಿಯ ವಿಕಾಸದಿಂದ' ಎಂಬುದಂತೂ ಸತ್ಯ.

ನಮ್ಮ ಸುಖ ಹೇಗಿದೆಯೆಂದರೆ ಕಪ್ಪೆಯೊಂದನ್ನು ಹಾವು ಹಿಡಿಯುತ್ತಿದೆ. ಆ ಕಪ್ಪೆ ಹಾರುವ ಚಿಟ್ಟೆಗೆ ನಾಲಿಗೆ ಚಾಚಿದೆ, ಈ ಚಿಟ್ಟೆ ಹೂವಿನ ಪರಿಮಳ ಹೀರಲು ತವಕಿಸಿದೆ. ಸುಖವೆನ್ನುವುದು ದೇಹಕ್ಕೆ ಅಂಟಿದೆಯೆನ್ನುವುದಾದರೂ ಆ ದೇಹವು ಸಹ ಅಸಹ್ಯಕರವಾಗಿದೆ.

'ಅಮೇಧ್ಯದ ಹಡಿಕೆ, ಮೂತ್ರದಾ ಕುಡಿಕೆ, ಎಲುಬಿನ ತಡಿಕೆ, ಕೀವಿನ ಮಡಿಕೆ, ಕರುಳಿನ ಜಾಳಿಗೆ, ಮೂತ್ರದ ಬಾವಿ' ಮುಂತಾಗಿ ದೇಹದ ಬಗೆಗೆ ಅಕ್ಕಮಹಾದೇವಿ ತನ್ನ ವಚನದಲ್ಲಿ ಬಣ್ಣಿಸಿದ್ದಾಳೆ.

ಹಾಗೆಯೇ ಲೋಕದಲ್ಲಿ ಸ್ತುತಿ-ನಿಂದೆಯೆಂಬ ಸುಖ-ದುಃಖಗಳು ಬಂದಡೆ ಕೋಪವ ತಾಳದೆ ಸಮಾಧಾನಿಯಾ ಗಿರಬೇಕೆಂದು ಕಿವಿಮಾತು ಹೇಳಿದ್ದಾಳೆ.

ಜೀವನದಲ್ಲಿ ಸುಖಕ್ಕಾಗಿ ಏನೆಲ್ಲಾ ಹೋರಾಟವನ್ನು ಮಾಡುತ್ತೇವೆ. ಇಂತಹ ಹೋರಾಟದಲ್ಲಿ ದುಃಖ ದುಮ್ಮಾನಗಳನ್ನು ಅಡ್ಡಿ-ಆತಂಕಗಳನ್ನು ಅಶ್ಚರ್ಯ-ಅಘಾತಗಳನ್ನು ಅನಿವಾರ್ಯವಾಗಿ ಎದುರಿಸಲೇಬೇಕಾಗುತ್ತದೆ. ನಂತರ ದೊರೆತ ಸುಖವೇನಾದರೂ ಶಾಶ್ವತವೇ? ಅದರ ಹಿಂದೆಯೇ ದುಃಖದ ನೆರಳು ಬರಲಾರಂಬಿಸುತ್ತದೆ. ಅದರ ಯೋಚನೆ ಯಾರು ತಾನೇ ಮಾಡಿಯಾರು? ದುಃಖವನ್ನು ದಾಟಿ ಸಾಗಲು ಸಜ್ಜಾಗುತ್ತದೆ. ಆಗ ದುಃಖ ನಮ್ಮನ್ನು ಕಂಗೆಡಿಸದು. 'ಎಲ್ಲರ ಮನೆಯ ದೋಸೆ ತೂತೇ' ಎಂದು ತಿಳಿದಾಗ ವ್ಯಥೆ ಪಡುವುದರಲ್ಲಿ ಅರ್ಥವಿಲ್ಲ.

ಬುದ್ಧ ಜಗದೆಲ್ಲೆಲ್ಲಾ ದುಃಖವಿದೆಯೆಂದಷ್ಟೇ ಹೇಳದೇ ಅದಕ್ಕೆ ಕಾರಣವನ್ನು ತಿಳಿಸಿದ. ಇಂತಹ ದುಃಖದಿಂದ ಪಾರಾಗಲು ಎಲ್ಲರ ಒಳಿತನ್ನೇ ಹಿತವನ್ನೇ ಬಯಸುವ ಸಮ್ಯಕ್‌ದೃಷ್ಟಿ, ಸಮ್ಯಕ್‌ಕರ್ಮ, ಸಮ್ಯಕ್‌ಜೀವನ, ಸಮ್ಯಕ್ ವ್ಯಾಯಾಮ, ಸಮ್ಯಕ್‌ಸ್ಮೃತಿ, ಸಮ್ಯಕ್ ಸಮಾಧಿಗಳೆಂಬ ಅಷ್ಟಾಂಗ ಮಾರ್ಗಗಳನ್ನು ಹೇಳಿರುವನು. ಗುಡ್ಡದ ತುದಿ ಏರಿ ನಿಂತಾಗ ಕೆಳಗಿನ ಗಿಡ ಮರಗಳೆಲ್ಲಾ ಕುಬ್ಜವಾಗಿ ತೋರುವಂತೆ ದುಃಖಕ್ಕಿಂತ ಎತ್ತರಕ್ಕೇರಿದಾಗ ಅದೂ ಸಹ ಕ್ಷುಲ್ಲಕವೆನಿಸದಿರದು.

ಇನ್ನು ನಮ್ಮ ದೇಶದ ಯಾವ ಮಹಾಕಾವ್ಯಗಳೂ ಸುಖ ಸಾಧನ ದೊಡ್ಡದೆಂದು ಹೇಳಿಲ್ಲ. ಸುಖ ಮತ್ತು ತ್ಯಾಗದಿಂದ ಬರುವ ಸಂತೋಷದ ಬಗೆಗೆ ಒತ್ತಿ ಹೇಳಿದೆ. ರಾಮ-ಸೀತೆ, ಹರಿಶ್ಚಂದ್ರ-ಚಂದ್ರಮತಿ, ನಳ-ದಮಯಂತಿ, ಪಾಂಡವರು-ದ್ರೌಪದಿ ಇವರೆಲ್ಲಾ ಪಟ್ಟ ಸುಖ ಎಂಥಹುದು. ಅರಮನೆಯ ಭೋಗವಲ್ಲ, ಬಿರಿಬಿಸಿಲಿನ ಕಾನನಗಳ ಪಥದಲ್ಲಿ, ಎಲೆಮನೆಗಳ ಆಶ್ರಯದಲ್ಲಿ, ನಿಸರ್ಗದ ಮಡಿಲಲ್ಲಿ. ನಿಜವಾದ ಸುಖ ಯಾವುದೆಂದರೆ ; ಬ್ರಹ್ಮಜ್ಞಾನಿ ಯಜ್ಞವಲ್ಕ್ಯ ಹೇಳಿದಂತೆ : 'ಗಂಡ-ಹೆಂಡತಿ ಮಕ್ಕಳು ಮುಂತಾದವರನ್ನು ನಾವು ಪ್ರೀತಿಸುವುದು ಅವರಿಗಾಗಿ ಅಲ್ಲ, ನಮಗಾಗಿಯೇ. ಕಾರಣ ಅವರೆಲ್ಲ ನನ್ನವರೆಂಬ ಸ್ವಾರ್ಥದಿಂದ ಹಾಗೂ ಅವರಿಂದ ಪ್ರತಿಫಲ ದೊರೆಯುವುದೆಂಬ ಅಭಿಲಾಷೆಯಿಂದ'. ನಮ್ಮ ಮನಸ್ಸು ಎಷ್ಟೋ ಬಾರಿ ಅಲ್ಪಸುಖಕ್ಕಿಂತ ಆಳವಾದ ದುಃಖದಲ್ಲಿ ಮುಳುಗುವುದೇ ಹೆಚ್ಚು. ಈ ಮಾಯಾಲೋಕದಲ್ಲಿ ತೇಲಲು ಬೇಕಾಗಿರುವುದು ನಿರ್ಲಿಪ್ತತೆಯ ತೇಲು ಕವಚವಷ್ಟೆ.

ಒಮ್ಮೇ ಶ್ರೀಕೃಷ್ಣನಿಗೆ ನಾರದರು 'ಪ್ರಭೂ ಈ ಮಾಯಾ ಸಾಗರವೆಂಬ ಸುಖದುಃಖದಲ್ಲಿ ಮುಳುಗುವುದೆಂದರೆ ಹೇಗೆ?' ಎಂದು ಕೇಳಿದನಂತೆ. ಅದಕ್ಕೆ ಶ್ರೀಕೃಷ್ಣ ಹೇಳುತ್ತೇನೆ ಎಂದು ತನ್ನೊಡನೆ ನಾರದನನ್ನು ಕರೆದುಕೊಂಡು ಸಂಚಾರಕ್ಕೆ ಹೊರಟ. ಮಾರ್ಗ ಮಧ್ಯದಲ್ಲಿ ಬಾಯಾರಿಕೆಗೆಂದು ನೀರು ತರಲು ಹೇಳಿದಾಗ 'ಆಯಿತು' ಎಂದು ನಾರದರು ಪಕ್ಕದಲ್ಲಿಯೇ ಇದ್ದ ಒಂದು ಮನೆಗೆ ತೆರಳಿ ಬಾಗಿಲು ಬಡಿದರು. ಒಳಗಿನಿಂದ ಒಬ್ಬ ಸುಂದರ ಯುವತಿ ಬಾಗಿಲು ತೆರೆದು, ಒಳಗೆ ಕರೆದು ಕುಳ್ಳರಿಸಿ ಸತ್ಕರಿಸಿದಳು. ಇದರಿಂದ ಸಂತುಷ್ಟರಾದ ನಾರದರು ಅವಳೊಡನೆ ಮಾತು-ಕಥೆಗಳಲ್ಲಿ ದಿನವೆಲ್ಲಾ ಮುಳುಗಿದರು. ಆಗ ಶ್ರೀಕೃಷ್ಣನು ಹೇಳಿದ್ದ ನೀರನ್ನು ಕೇಳಲು ಮರತೇಬಿಟ್ಟರು. ಕೊನೆಗೆ ಆ ಯುವತಿಯ ತಂದೆಯ ಅಪ್ಪಣೆಯ ಮೇರೆಗೆ ಆ ದಿನ ಅಲ್ಲಿಯೇ ಉಳಿದುಕೊಂಡರು. ಕೆಲದಿನಗಳ ನಂತರ ಅವಳನ್ನೇ ವಿವಾಹವಾಗಿ ಅಲ್ಲಿನ ಆಸ್ತಿಗೆಲ್ಲಾ ಒಡೆಯರಾಗಿ, ಮಕ್ಕಳನ್ನು ಪಡೆದು ಸುಖದ ಸುಪ್ಪತ್ತಿಗೆಯಲ್ಲಿ ಕಾಲಕಳೆದು ತೊಡಗಿದರು. ಹೀಗಿರುವಾಗ ಒಮ್ಮೆ ಇದ್ದಕ್ಕಿದ್ದಂತೆ ಪಕ್ಕದ ಸಮುದ್ರದಿಂದ ದೊಡ್ಡ ಅಲೆಯೊಂದು ಮನೆಗೆ ಅಪ್ಪಳಿಸಿತು. ಇದರಿಂದ ನಾರದರ ಆಸ್ತಿಯೆಲ್ಲಾ ನೀರು ಪಾಲಾಯ್ತು. ಕೊಚ್ಚಿ ಹೋಗುತ್ತಿದ್ದ ಹೆಂಡತಿ-ಮಕ್ಕಳನ್ನು ಉಳಿಸಿಕೊಳ್ಳಲಾಗದೇ ಭಾರೀ ದುಃಖದಲ್ಲಿ ಮುಳುಗಿದರು. ಸತತವಾಗಿ ದುಃಖಿಸುತ್ತಾ ಕೂತ ನಾರದರನ್ನು 'ಕೇವಲ ನೀರಷ್ಟೇ ತರಲು ಹೋಗಿ ಆಸ್ತಿ, ಹೆಂಡತಿ-ಮಕ್ಕಳನ್ನೇ ನೀರಿನಲ್ಲಿ ಮುಳುಗುವುದನ್ನು ನೋಡಿದರಲ್ಲ' ಎಂದು ಯಾರೊ ಮಾತಾಡಿಸಿದಂತೆ ಭಾಸವಾಯ್ತು. ತಕ್ಷಣ ಹಿಂತಿರುಗಿ ನೋಡಿದ ನಾರದರಿಗೆ ಶ್ರೀಕೃಷ್ಣ ನಗುತ್ತಾ ನಿಂತಿದ್ದ 'ನಾರದರೇ ಈಗ ಸುಖದುಃಖಗಳೆಂದರೇನು? ಮಾಯಾಸಾಗರ ಎಂದರೇನು? ಅದರಿಂದೇನಾಗುವುದು ಎಂದೆಲ್ಲಾ ತಿಳಿಯಿತೆ? ಎಂದಾಗ ನಾರದರು ತಲೆ ತಗ್ಗಿಸಿದ್ದರಲ್ಲದೆ ಅವರಿಗೆ ಜ್ಞಾನೋದಯವಾಯ್ತು.

ಇದೇ ರೀತಿ ನಾವೆಲ್ಲರೂ ಸುಖದುಃಖಗಳಿಗೆ ಬಲಿಯಾಗಿ ಹೆಣಗಾಡುತ್ತಿದ್ದೇವೆ. ಇವುಗಳನ್ನು ಹೆಚ್ಚಾಗಿ ಅಂಟಿಸಿಕೊಳ್ಳದೇ ನಿರ್ಲಿಪ್ತತೆ ಇರುವುದೇ ಉತ್ತಮ. ಒಮ್ಮೆ ಯಕ್ಷನು ಧರ್ಮರಾಯನಿಗೆ ಯಾವುದನ್ನು ಹತೋಟಿಯಲ್ಲಿಡುವುದರಿಂದ ಸುಖದುಃಖ ಉಂಟಾಗದು? ಎಂದು ಕೇಳಿದಾಗ 'ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡವರಿಗೆ' ಎಂದು ಉತ್ತರಿಸಿದರಂತೆ. ಸುಖದ ಆಲಿಂಗನದಲ್ಲಿಯೇ ದುಃಖದ ಅವತಾರವಾಗುವುದು ನಿಶ್ಚಿತ. ಇದನ್ನು ತಿಳಿದೂ





ತಿಳಿದೂ ಬಯಸಿ ಬಯಸಿ ಬಂದ ಸುಖದ ರೂಪದ ದುಃಖವನ್ನು ಮೈಮರೆತು ಆಹ್ವಾನಿಸುತ್ತಿದ್ದೇವೆ. ಅದೇ ಸ್ವರ್ಗವೆಂದು ನೆನೆದು ಹಂಬಲಿಸಿದ್ದೇವೆ. 'ನಿಜವಾದ ಸುಖವಿರುವುದು ಪ್ರೀತಿಯಲ್ಲಿ, ಧೈರ್ಯದಲ್ಲಿ, ತ್ಯಾಗದಲ್ಲಿ, ಸೇವೆಯಲ್ಲಿ' ಎಂದು ರಂ. ಶ್ರೀ ಮುಗುಳಿಯವರು ಹೇಳಿದ್ದಾರೆ. 'ಊರೊಳಗಿದ್ದಡೆ ನರರ ಹಂಗು, ಅರಣ್ಯದೊಳಗಿದ್ದಡೆ ತರುಗಳ ಹಂಗು' ಎಂದು ಸಕಲೇಶ ಮಾದರಸ ಹೇಳಿದಂತೆ 'ಡೆಲ್ಲಿಗೆ ಹೋದ್ರೂ ಡೊಳ್ಳಿಗೆ ಒಂದೇ ಪೆಟ್ಟು' ಎಂಬ ಜನಪದರ ಮಾತು ಎಷ್ಟೊಂದು ಔಚಿತ್ಯಪೂರ್ಣ.

*ಇರುವ ಕೆಲಸ ಮಾಡು ಕಿರಿದೆನ್ನದೆ ಮನವಿಟ್ಟು*
*ದೊರೆತುದ ಹಸಾದವೆಂದುಣ್ಣು ಗೊಣಗಿಡದೆ*
*ಧರಿಸು ಲೋಕದ ಬರುವ ಪರಮಾರ್ಥವನ್ನು ಬಿಡದೆ*
*ಹೊರಡು ಕರೆ ಬರಲ್ ಅಳದೆ ಮಂಕುತಿಮ್ಮ*

ನಮ್ಮ ಗ್ರೇಡಿಗೆ ಸರಿಯಾದ ಇಂಥದ್ದೇ ಕೆಲಸ ಸಿಗಬೇಕು. ಇಂತಿಷ್ಟೇ ಪ್ರತಿಫಲ ದೊರೆಯಬೇಕು ಎಂದು ಪೂರ್ವಗ್ರಹ ಪೀಡಿತವಾಗಿ ಯೋಚಿಸಿದರೆ ಪ್ರಯೋಜನವಿಲ್ಲ. ಇರುವ ಕೆಲಸದಲ್ಲಿಯೇ ದೇವರ ನಾಮಸ್ಮರಣೆಯಿಂದ ಸುಖ ಕಂಡುಕೊಳ್ಳಬೇಕಷ್ಟೆ. ಕರ್ತವ್ಯದಲ್ಲಿ ಬರುವ ಲೋಪ-ದೋಷಗಳನ್ನು ದುಃಖದುಮ್ಮಾನಗಳನ್ನು ಸಹಿಸಿಕೊಂಡು ನಿರ್ಲಿಪ್ತತೆಯಿಂದಿರಬೇಕು. 'ಲೋಕದ ಡೊಂಕು ನೀವೇಕೆ ತಿದ್ದುವಿರಿ. ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ' ಎಂಬ ಬಸವಣ್ಣನವರ ನುಡಿಯಂತೆ ಬದುಕಬೇಕು. ಕೊನೆಗೆ ಕಾಲನ ಕರೆ ಬಂದಾಗಲೂ ಇನಿತೂ ಎದೆಗುಂದದೆ ದುಃಖ-ದುಮ್ಮಾನಗಳೆಡೆಯಲ್ಲಿಯೇ ಎಲ್ಲವನ್ನೂ ಬಿಟ್ಟು ತೆರಳುವ ಅಂಟದ ನಂಟು ನಮ್ಮದಾಗಬೇಕು.

ಬಹು ದುಃಖವಾದಾಗ ಈ ಪ್ರಪಂಚದಲ್ಲಿ ತನಗಿಂತ ಹೆಚ್ಚು ದುಃಖಪಡುವವರು ಇರಬಹುದೆಂಬ ಮನಸ್ಸಿಗೆ ಸಮಾಧಾನ ತಂದುಕೊಳ್ಳಬೇಕಷ್ಟೆ ಅಂದರೆ ಇರುವ ಗೆರೆಯ ಪಕ್ಕದಲ್ಲಿ ಇನ್ನಷ್ಟು ದೊಡ್ಡ ಗೆರೆಯನ್ನು ಎಳೆದುಕೊಂಡಾಗ ನಾವೂ ಇತರರಿಗಿಂತ ಪರ್ವಾಗಿಲ್ಲವೆಂಬ ಸಂತೋಷವನ್ನು ಹೊಂದಬಹುದಲ್ಲವೇ? ಎಲ್ಲ ಸಮಯ, ಸಂದರ್ಭಗಳಲ್ಲಿ ಆಶ್ಚರ್ಯ, ಅಘಾತ, ನಿರೀಕ್ಷೆ, ಸಂಕಟಗಳಲ್ಲಿ ಈ ಎರಡೂ ಅಡಗಿರಬಹುದು. ಜೀವನದ ಕೊನೆಯುವರೆಗೂ ಹಿಡಿಯುವಷ್ಟು ಸುಖ ಹಾಗೂ ಬಿಟ್ಟು ಬಿಡುವಷ್ಟು ದುಃಖಗಳಿಲ್ಲವೆಂದು ನಿಜ ತಾನೆ?

*

## ಆಧ್ಯಾತ್ಮಿಕ ವಿಷಯದಲ್ಲಿ 'ಸಂಸಾರ'

ಸಂಸಾರವೆಂಬುದು ಸಾಗರದ ಎಂದು ನಮ್ಮ ಗುರು ಹಿರಿಯರು ಹೇಳುವರು. ಇಲ್ಲಿ ಇಳಿಯಬೇಕು, ಈಜಬೇಕು, ಮುಳುಗಬಾರದು ಇದನ್ನೆ ನಮ್ಮ ಶಿವಶರಣರು ಯೋಗಿಗಳು ಮಾರ್ಮಿಕವಾಗಿ ನುಡಿದಿದ್ದಾರೆ. ಸಂಸಾರ ಎಂದ ಮೇಲೆ ಜಗಳ ಪ್ರೀತಿ ಅನುಕಂಪ ಇತ್ಯಾದಿಗಳು ಇದ್ದರೂ ಅನುಭವದ ಸಾಗರ ಎಂದರೂ ಅಡ್ಡಿಯಿಲ್ಲ. ಆಧ್ಯಾತ್ಮಿಕ ಜಗತ್ತಿನಲ್ಲಂತೂ ಸಂಸಾರಸ್ಥರೂ ಎಲ್ಲವನ್ನೂ ತಿಳಿಯುತ್ತಲೇ ನಡೆಯುತ್ತಿರಬೇಕು. ಹೇಗೆಂದರೆ, ಅಕ್ಕಮಹಾದೇವಿಯವರು, ವರ್ಣಿಸಿದ ಹಾಗೆ,

"ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ
ಮಾಡಿತನ್ನ ನೂಲು ತನ್ನನ್ನೇ ಸುತ್ತಿ ಸುತ್ತಿ
ಸಾವ ತೆರನಂತೆ,
ಮನಬಂದುದ ಬಯಸಿ ಬೇವುತ್ತಿರುವೆನಯ್ಯಾ
ಅಯ್ಯಾ ಎನ್ನ ಮನದ ದುರಾಶೆಯ ಮಾಣಿಸಿ"
ನಿಮ್ಮತ್ತ ತೋರಾ, ಚೆನ್ನಮಲ್ಲಿಕಾರ್ಜುನಯ್ಯಾ -ಎಂದರು.

ಇದರರ್ಥ ರೇಷ್ಮೆಯ ಹುಳು ತನ್ನ ಒಡಲಿಂದ ಸುಂದರವಾದ ನೂಲೆಳೆಗಳನ್ನು ಹೊಮ್ಮಿಸಿ ಅದರಿಂದ ಗೂಡು ಕಟ್ಟಿಕೊಳ್ಳುತ್ತದೆ. ಆ ನೂಲು ಎಷ್ಟು ನುಣುಪೋ ಅಷ್ಟೆ ಬಲಿಷ್ಟವಾದುದು. ಸಂಸಾರ ಬಂಧನ ಈ ರೇಷ್ಮೆಯಂತೆ ಮೋಹಕವಾದರೂ ಅತ್ಯಂತ ಅಪಾಯಕಾರಿ, ಅದರಿಂದ ತಪ್ಪಿಸಿಕೊಳ್ಳುವುದು ಬಹಳ ಕಷ್ಟ.

ಇಂಥಾ ಸಂಸಾರ ಬಂಧನದಲ್ಲಿ ಪೂರ್ವಾಪರಗಳನ್ನು ಲಕ್ಷದಲ್ಲಿ ಇರಿಸಿಕೊಂಡು ಒಂದು ಸಂಬಂಧಗಳನ್ನು ಸರಿಯಾಗಿ ಅರ್ಥಮಾಡಿಕೊಂಡು ನಮ್ಮ ಮೇಲಿರುವ ಭಾರವನ್ನು ತೀರಿಸುವ ರೀತಿಯಲ್ಲಿ ನಾವು ಬದುಕನ್ನು ಸಾಗಿಸಬೇಕು ಎನ್ನುವಂತೆ ಹೊಂದಿಕೊಂಡು ಹೋಗುತ್ತಿರಬೇಕು.

ಸಂಸಾರದಲ್ಲಿನ ನಮ್ಮ ಬದುಕು ಸಾರ್ಥಕವಾಗಬೇಕಾದರೆ ಅರ್ಥಪೂರ್ಣವಾಗಬೇಕಾದರೆ ನಮ್ಮ ನಮ್ಮ ಪಾಲಿನ ಕರ್ತವ್ಯಗಳನ್ನು ಮನಮುಟ್ಟಿ ಮಾಡಬೇಕು. ಸಂಸಾರದಲ್ಲಿ ನಮ್ಮ ಮನಸ್ಸೆಂಬ ನಮ್ಮ ಮನೆ ಇಲಿಗಳು ಹಲವಾರು ಬಿಲಗಳಂತೆ ಗೊಂದಲ ಮಯವಾಗಿರಬಾರದು. ಮನಸ್ಸೆಂಬ ನಮ್ಮ ಮನೆಗೆ ಎರಡೆ ಕೋಣೆಗಳು. ಒಂದು ಹೊರ ಇನ್ನೊಂದು ಒಳ ಕೋಣೆ ಈ ಜಗತ್ತಿನವರೊಡನೆ ಬದುಕುವುದಕ್ಕೆ ಹೊರಕೋಣೆ ಸೀಮಿತ. ಒಳಕೋಣೆಯಲ್ಲಿ ಸಂಸಾರದ ತಾಪತ್ರಯ ಸುಳಿಯಬಾರದು. ನಾವು ಶಾಂತತೆಯಿಂದ ನೆಮ್ಮದಿಯಿಂದ ಪರಿಶ್ರಮಿಸಬೇಕು. ಹಾಗೆಯೆ ಆತ್ಮಸಾಕ್ಷಾತ್ಕಾರವಾಗಬೇಕು.

-ಶ್ರೀಮತಿ ಶೋಭಾ ಎಸ್. ಕೋಟಿ

# ಹಸಿವು – ದಾಸೋಹ – ಗರೀಬಿ ಹಟಾವೋ

– ಪ್ರೊ. ಚಂದ್ರಕಾಂತ ಎಸ್. ಭಟ್, 'ಭಾಗ್ಯಶ್ರೀ' ಶಿವಾನಂದ ನಗರ, ಗದಗ –೫೮೨ ೧೦೩.

*ನಾಸ್ತಿ ಕ್ಷುಧಾಸಮಃ ಸುಖಂ ನಾಸ್ತಿ*
*ರೋಗೋಕ್ಷುಧಾಸಮಃ ।*
*ನಾಸ್ತ್ಯಾಹಾರ ಸಮಂ ಸೌಖ್ಯಂ ನಾಸ್ತಿ ಕ್ರೋಧಸಮೋ*
*ರಿಪುಃ ॥*

*ಹಸಿವೆಗೆ ಸಮಾನವಾದ ದುಃಖವಾಗಲೀ, ರೋಗವಾಗಲೀ ಬೇರಾವುದೂ ಇಲ್ಲ. ಆಹಾರಕ್ಕೆ ಸಮಾನವಾದ ಸೌಖ್ಯವಿಲ್ಲ ಮತ್ತು ಸಿಟ್ಟಿಗೆ ಸಮಾನವಾದ ಶತ್ರುವಿಲ್ಲ.*

ಹಸಿವಿನಿಂದ ಕಂಗಾಲಾದವರಿಗೆ ಶಕ್ತಿಗುಂದುತ್ತದೆ. ಯಾವುದೇ ಕೆಲಸ ಮಾಡಲು ಮತ್ತು ಸ್ವಲ್ಪೇ ದೂರ ನಡೆಯಲು ಸಹ ಅವರ ದೇಹವು ಅಸಮರ್ಥವಾಗುತ್ತದೆ. ಆಹಾರವೇ ಸಿಗದಿದ್ದರೆ ಹೃದಯವು ಕ್ಷೀಣಿಸುತ್ತದೆ. ಕಣ್ಣುಗಳು ಕತ್ತಲಿಟ್ಟು ಎಚ್ಚರ ತಪ್ಪತೊಡಗುತ್ತವೆ. ಇಷ್ಟಾದರೂ ಆಹಾರವು ದೊರೆಯದೇ ಇದ್ದಲ್ಲಿ, ಮುಂದೆ ಕೆಲವೇ ದಿನಗಳಲ್ಲಿ ಸಾವೂ ಸಂಭವಿಸಬಹುದು. ಹಸಿವೆ ಎಂಬುದು ಎಷ್ಟೊಂದು ಶಕ್ತಿಶಾಲಿ. ವೀಣೆ, ಕೊಳಲು, ಕಾವ್ಯ, ಸಂಗೀತ, ನಾಟಕ, ಸಿನಿಮಾ, ಗೋಷ್ಠಿ, ಸಮಾರಂಭ, ಚಂದನ, ಬೆಳದಿಂಗಳು, ಚಂದ್ರಮುಖಿಯರಾದ ತರುಣಿಯರು ಹೀಗೆ ಹಲವಾರು ಸುಂದರವಾದ ರಮ್ಯವಸ್ತುಗಳೂ ಸಹ ಹಸಿವು– ಬಾಯಾರಿಕೆಗಳಿಂದ ಬಳಲಿದವರಿಗೆ ರಮ್ಯವಾಗಿ ಕಾಣುವುದಿಲ್ಲ. ಏಕೆಂದರೆ ಎಲ್ಲ ಕಾರ್ಯದ ಆರಂಭವೂ ಆಹಾರ ಸೇವಿಸುವಿಕೆಯನ್ನೇ ಅವಲಂಭಿಸಿದೆ. ಹಸಿದವರಿಗೆ ಆಹಾರ ಸೇವನೆಯೊಂದನ್ನು ಬಿಟ್ಟು, ಬೇರಾವ ಆಲೋಚನೆಯೂ ಬರಲಾರದು. ಸಿಟ್ಟು–ಉದ್ವೇಗ–ಬಳಲುವಿಕೆ ಹೆಚ್ಚಾಗಿ, ಬೇರಾವ ವಿಷಯಗಳೂ ಇಷ್ಟವಾಗುವುದಿಲ್ಲ. ಯಾರಿಗೆ ಹೊಟ್ಟೆ ತುಂಬ ಆಹಾರ ವಿರುತ್ತದೆಯೋ, ಅವರಿಗೆ ಬೇರೆ ಬೇರೆ ಆಲೋಚನೆಗಳು, ಶಾಂತಿಯ ಮಾತುಗಳು, ಧರ್ಮಾಧರ್ಮ, ನೀತಿ ಅನೀತಿ ವಿವೇಚನೆಗಳು ಮುಂತಾಗಿ ಏನೊಂದೂ ತೋಚದಂತಾಗುತ್ತದೆ. ಹಸಿವೆಯೆಂಬುದು ಅಷ್ಟೊಂದು ಪ್ರಬಲವಾಗಿರುತ್ತದೆ.

*ತ್ಯಜೇತ್ ಕ್ಷುಧಾರ್ತಾಮಹಿಳಾಸ್ವಪುತ್ರಂ, ಖಾದೇತ್*
*ಕ್ಷುಧಾರ್ತಾಭುಜಗಿಸ್ವಮಂಡಂ ।*
*ಭುಭುಕ್ಷಿತಃ ಕಿಂ ನ ಕರೋತಿ ಪಾಪಂ, ಕ್ಷೀಣಾ ನರಾಃ*
*ನಿಷ್ಕರುಣಾ ಭವಂತಿ ॥*

ಹಸಿವಿನಿಂದ ಬಳಲುತ್ತಿರುವ ಮಹಿಳೆಯು ಪುತ್ರನನ್ನೇ ಬಿಟ್ಟು ಬಿಡುವಳು(ತನಗೇ ಹೊಟ್ಟೆಗಿಲ್ಲದಿರುವಾಗ ಮಗುವಿಗೆಲ್ಲಿಂದ ತರಲಿ? ಎಂಬ ಚಿಂತೆ ಕಾಡುವುದರಿಂದ ಪುತ್ರ ವಾತ್ಸಲ್ಯವನ್ನೇ ತ್ಯಜಿಸುವ ಪರಿಸ್ಥಿತಿ ಬರುತ್ತದೆ, ಬೇರೆಯವರಾದರೂ ಸಾಕಿಕೊಳ್ಳಲಿ ಎಂದು, ಮನಸ್ಸಿಲ್ಲದಿದ್ದರೂ ತ್ಯಾಗ ಮಾಡುತ್ತಾಳೆ. ಹಸಿವಿನಿಂದ ಮಗುವನ್ನು ಮಾರಿದವರೂ ಸಿಗುತ್ತಾರೆ) ಹಸಿವಿನಿಂದ ಬಳಲಿದ ಹೆಣ್ಣು ಸರ್ಪವು ತಾನಿಟ್ಟ ಮೊಟ್ಟೆಯನ್ನೇ ತಿನ್ನುತ್ತದೆ.(ತಡೆಯಲಾರದ ಹಸಿವಿನಿಂದ ಕಂಗಾಲಾದ ಹೆಣ್ಣು ಸರ್ಪವು, ಬದುಕಲಸಾಧ್ಯವಾದ ಸನ್ನಿವೇಶಕ್ಕನುಸಾರವಾಗಿ, ತಾನಿಟ್ಟ ಮೊಟ್ಟೆಯನ್ನೇ ತಿನ್ನುತ್ತದೆ. ನಂತರದಲ್ಲಿ ಉಳಿದ ಮೊಟ್ಟೆಗಳು ಮರಿಯಾಗುವಂತೆ ರಕ್ಷಿಸುತ್ತದೆ. ಅಂತೆಯೇ ಹೆಣ್ಣು ಹುಲಿ, ಹೆಣ್ಣುನಾಯಿ, ಹೆಣ್ಣು ಬೆಕ್ಕು, ಇತ್ಯಾದಿ ಕೆಲವು ಪ್ರಾಣಿಗಳು ತಮ್ಮ ಮರಿಯನ್ನೇ ತಿಂದು ಪ್ರಸೂತಿಯಾದ ನಂತರದ ಭಯಂಕರ ಹಸಿವಿನಿಂದ ಬಚಾವಾಗಿ, ನಂತರ ಮರಿಗಳನ್ನು ವಾತ್ಸಲ್ಯದಿಂದ ಪೋಷಿಸುತ್ತವೆ) ಹಸಿವಿನಿಂದ ಬಳಲುತ್ತಿರುವವರು ಯಾವ ಪಾಪ ಮಾಡುವುದಿಲ್ಲ. ಹಸಿವೆಯಿಂದ ಕ್ಷೀಣರಾದ ಮನುಷ್ಯರು ಕರುಣಾಹೀನರಾಗುತ್ತಾರೆ. (ಹಸಿವೆಯಿಂದ ಕಂಗಾಲಾದವರು ಕರುಣಾರಹಿತರಾಗಿ, ಪಾಪಬುದ್ಧಿಯವರೂ ಆಗುತ್ತಾರೆ. ಸಮಾಜಾಘಾತಕ–ಸಮಾಜಪಿಡಕರೂ ಆಗುವ ಸಾಧ್ಯತೆ ಇದೆ. ಜನಸಂಖ್ಯಾಸ್ಫೋಟವೂ ಬಡತನಕ್ಕೆ ಕಾರಣ. 'ಹಸಿವು' ಎಂಬುದು ನಾಚಿಕೆ, ಸ್ವಾಭಿಮಾನ, ಪಾಪ–ಪುಣ್ಯಗಳ ಪರಿವೆಯನ್ನೇ ಬಿಡಿಸಿ, ಕಳುವು–ಖೂನಿ, ದರೋಡೆ ಮುಂತಾದ ಕಾರ್ಯಗಳನ್ನು ಮಾಡಲು ಪ್ರೇರೇಪಿಸುತ್ತದೆ. ಹಸಿವಿನಿಂದ ಕಂಗಾಲಾದವರಿಗೆ ತಿನ್ನಬಾರದ ವಸ್ತುವಿಲ್ಲ(ನಾಸ್ತಿ ಅಭಕ್ಷ್ಯಂ ಕ್ಷುಧಿತಸ್ಯ) ಹಸಿವಾದವನಿಗೆ ಏನನ್ನಾದರೂ, ಹೇಗಾದರೂ ತಿನ್ನುವುದೊಂದೇ ವಿಚಾರ ಮಾತ್ರ ಬರುತ್ತದೆ.

ಅದಕ್ಕಾಗಿಯೇ 'ದರಿದ್ರೇ ದೀಯತೇ ದಾನಂ ಸಫಲಂ'– ದರಿದ್ರರಿಗೆ ಕೊಡುವ ದಾನ ಸಫಲ, 'ದೇಯಮನ್ನಂ ಕ್ಷುಧಾರುರೇ –ಹಸಿದು ಕಂಗಾಲಾದವರಿಗೆ ಅನ್ನಾಹಾರವನ್ನು





ಕೊಡಬೇಕು. 'ಸತ್ಪಾತ್ರೆಯೊಳ್ ದಾನವಂ –ಯೋಗ್ಯರಾದ ಬಡವರಿಗೆ ದಾನ ಕೊಡಬೇಕು. ಅನ್ನದಾನಕ್ಕಿಂತ ಬೇರೆ ದಾನವುಂಟೆ? ಮುಂತಾಗಿ ವೈವಿಧ್ಯ ರೀತಿಯಿಂದ ದಾನದ ಮಹಿಮೆಯನ್ನು ಕೊಂಡಾಡಲಾಗಿದೆ. ಅನ್ನದಾನವು ಪುಣ್ಯಪ್ರದ. ಹಸಿವಿನಿಂದ ಕಂಗಲಾದವರಿಗೆ, ಆಹಾರ ನೀಡಿದರೆ ಒಬ್ಬನನ್ನು ತಾತ್ಕಾಲಿಕವಾಗಿ ಬದುಕಿಸಿದ ಪುಣ್ಯವು ಬರುತ್ತದೆ. ಉಳ್ಳವರು ಬಡವರಿಗೆ ಮುದುಕರಿಗೆ, ಅಂಗವಿಕಲರಿಗೆ ದಾನ ಮಾಡುವುದು ಪುಣ್ಯದ ಕೆಲಸವೆನಿಸಿದೆ. ಆದ್ದರಿಂದಲೇ, ಬಡವರಿಗೆ, ಹಸಿದು ಕಂಗಾಲಾದವರಿಗೆ ದಾನ ಮಾಡಬೇಕೆಂದು ಎಲ್ಲಾ ಧರ್ಮಗಳು ತಿಳಿಸಿವೆ. ಈ ಕಾರಣಕ್ಕಾಗಿ ಮಾನವೀಯತೆ ಯಿಂದ ಹಲವಾರು ತಮ್ಮ ಕೈಲಾದ ದಾನವನ್ನು ಮಾಡುತ್ತಲೂ ಬಂದಿರುತ್ತಾರೆ. ಕುಡುಕರಿಗೆ, ವ್ಯಸನಿಗಳಿಗೆ, ಸೋಮಾರಿಗಳಿಗೆ ದಾನ ಮಾಡಿದರೆ ವ್ಯರ್ಥವೆಂದೂ ತಿಳಿಯತೊಡಗಿದ್ದಾರೆ, ಹೇಳತೊಡಗಿದ್ದಾರೆ.

ಹಿಂದೆ ರಾಜರ ಕಾಲದಲ್ಲಿ ಪ್ರವಾಸಿಗರಿಗೆ ಅನುಕೂಲವಾಗುವಂತೆ ಅನ್ನಛತ್ರಗಳಿರುತ್ತಿದ್ದವು. ಅನೇಕ ರಾಜರು ಬಡವರಿಗೆ ಅನುಕೂಲ ಒದಗಿಸಿರುವುದು ತಿಳಿದು ಬರುತ್ತದೆ. ಅನೇಕ ಸನ್ಯಾಸಿಗಳು, ಹರಿದಾಸರು, ಆಧ್ಯಾತ್ಮ ಜೀವಿಗಳು, ಸಾಧು–ಸಂತರು, ಸರ್ವಜ್ಞನಂತಹ ಜ್ಞಾನಿಗಳೂ ಸಹ, ಆಧ್ಯಾತ್ಮಚಿಂತನೆಗಳನ್ನು ಹೆಚ್ಚು ಮಾಡಿ, ಆಹಾರ ಚಿಂತನೆ ಕಡಿಮೆಗೊಳಿಸಿದ ಭಿಕ್ಷುಗಳಾದ ಉದಾಹರಣೆಗಳಿವೆ. 'ಹಸಿವಾದೊಡೆ ಭಿಕ್ಷಾನ್ನಗಳುಂಟು' ಎಂದು ಅಕ್ಕಮಹಾದೇವಿಯುವರ ವಚನವಿದೆ. ಕನಕದಾಸರು 'ಸತ್ಯವಂತರ ಸಂಗವಿರಲು ತೀರ್ಥವೇತಕೆ, ನಿತ್ಯ ಅನ್ನದಾನವಿರಲು ಭಯವು ಏತಕೆ? ಎಂದು ಹಾಡಿದ್ದಾರೆ. ಆದಿಗುರು ಶಂಕರಾಚಾರ್ಯರು ಭವತಿ ಭಿಕ್ಷಾಂದೇಹಿ ಎಂದಿದ್ದಾರೆ. ಬಡವರ ಹಾಗೂ ಆಧ್ಯಾತ್ಮ ಚಿಂತಕರ ಹಸಿವು ನೀಗಲೆಂದೇ ಬಸವೇಶ್ವರರು 'ಅನ್ನದಾಸೋಹಕ್ಕೆ' ಮಹತ್ವ ನೀಡಿದ್ದರು. ಅನೇಕ ಮಠಗಳಲ್ಲಿ ಭೋಜನ ಪ್ರಸಾದ ಅನ್ನದಾಸೋಹವು ಇನ್ನೂ ನಡೆಯುತ್ತಾ ಬಂದಿದೆ. ಅನೇಕ ಪುಣ್ಯಕ್ಷೇತ್ರಗಳಲ್ಲಿ ಯಾತ್ರಿಕರಿಗೆ ಊಟದ ವ್ಯವಸ್ಥೆ ಇದೆ. ಅನ್ನಾಹಾರ ಶ್ರೇಷ್ಠವೆಂಬುದು ಅನ್ನದಾಸೋಹ–ಅಕ್ಷರದಾಸೋಹದಿಂದ ಜನಜನಿತ.

ಬಡತನ ಇರುವುದು ಸಹಜವಾದರೆ, ಇನ್ನೊಂದು ತಂದುಕೊಂಡ ಬಡತನ ಎನ್ನಬಹುದು. ಕೆಲವರು ಬಡವರೆನ್ನಿಸಿಕೊಂಡವರು ತಂಬಾಕು, ಬೀಡಿ, ಗುಟ್ಕಾ–ಸಿಗರೇಟು, ಹೆಂಡಕುಡಿತ, ಇಸ್ಪೀಟ್ ಆಟ, ಜಾಕ್‌ಪಾಟ್, ಲಾಟರಿ, ಮುಂತಾದ ದುಶ್ಚಟಗಳನ್ನು ಅಂಟಿಸಿಕೊಂಡು ಬಡತನ ತಂದುಕೊಳ್ಳುತ್ತಾರೆ. ಕೂತು ಉಂಡರೆ ಕುಡಿಕೆ ಹೊನ್ನು ಸಾಲದು ಎಂಬ ಗಾದೆಯಂತೆ ಸೋಮಾರಿತನ, ಆಲಸ್ಯದಿಂದ ಕೆಲಸವನ್ನೇ ಮಾಡದೇ ಬಡತನ ತಂದು ಕೊಳ್ಳುತ್ತಾರೆ. ಹೆಚ್ಚು ಮಕ್ಕಳನ್ನು(ಹೆಚ್ಚು ಹೆಂಡಂದಿರು, ಡಜನ್‌ಗಟ್ಟಲೆ ಮಕ್ಕಳು) ಪಡೆಯುವುದೂ ಬಡತನ ತಂದಿಕೊಳ್ಳಲು ಕಾರಣವಾಗುತ್ತದೆ. 'ಕಾಯಕವೇ ಕೈಲಾಸ'ವೆಂದು ಸಾಧ್ಯವಿದ್ದ ಕೆಲಸ ಮಾಡಿ, ದುಡಿದು–ಗಳಿಸಿ ತಿನ್ನುವುದು ಶ್ರೇಷ್ಠಮಾರ್ಗ. ಗಳಿಸಿದ್ದರಲ್ಲಿ ಸ್ವಲ್ಪ ಉಳಿಸಿಕೊಂಡರೆ ಕಷ್ಟದ ದಿನಗಳನ್ನೆದುರಿಸಲು ಸಹಾಯವಾಗುತ್ತದೆ. ಸರ್ಕಾರವು ಹೆಚ್ಚು ಮಕ್ಕಳಿದ್ದವರಿಗೆ ಸೌಲಭ್ಯ ಒದಗಿಸದೇ, ಕಡಿಮೆ ಮಕ್ಕಳಿದ್ದವರಿಗೆ ಮಾತ್ರ ಸರ್ಕಾರಿ ಸೌಲಭ್ಯ ಒದಗಿಸಿದರೆ, ಕಡಿಮೆ ಮಕ್ಕಳನ್ನು ಪಡೆಯಲು ಪ್ರೋತ್ಸಾಹಿಸಿದಂತಾಗುತ್ತದೆ. ಗಾಂಧೀಜಿಯವರ ಹೇಳಿಕೆಯಂತೆ– ಮದ್ಯಪಾನ ಪ್ರತಿಬಂಧ ಸುಖೀಕುಟುಂಬಕ್ಕೆ ಮಾರ್ಗವಾಗಿ, ನಿಜವಾದ ಗರೀಬಿ ಹಟಾವೋ ಆಗುತ್ತದೆ. *

## ದಾಸೋಹವೇ ದೇವಧಾಮ

*ಸತ್ಯಶುದ್ಧ ಕಾಯಕವ ಮಾಡಿ ತಂದು*
*ವಂಚನೆಯಿಲ್ಲದೇ ಪ್ರಪಂಚವಳಿದು*
*ನಿಚ್ಚ ಜಂಗಮಕ್ಕೆ ದಾಸೋಹವ ಮಾಡುವ*
*ಸದ್ಭಕ್ತನ ಹೃದಯದೊಳಗೆ ಅಚ್ಚೊತ್ತಿದಂತಿಪ್ಪ*
*ಕಾಮಧೂಮ ಧೂಳೇಶ್ವರಾ*
*–ಮಾದಾರ ಧೂಳಯ್ಯಾ*

ಸದಾಚಾರದ ಒಂದು ಅಂಗ ಸತ್ಯಶುದ್ಧ ಕಾಯಕವಾದರೆ, ಇನ್ನೊಂದು ಅಂಗ ಭಕ್ತಿಯ ದಾಸೋಹವಾಗಿದೆ. ಕಾಯಕ ಮತ್ತು ದಾಸೋಹಗಳು ಲಿಂಗವಂತನ ಬಾಳಿನ ಅವಿಭಾಜ್ಯ ಅಂಗಗಳಾಗಿವೆ.

ಸತ್ಯಶುದ್ಧ ಕಾಯಕವ ಮಾಡಿ, ಆ ಕಾಯಕದಿಂದ ಗಳಿಸಿದ ಫಲವನ್ನು ತಂದು, ವಂಚನೆಯಿಲ್ಲದೇ ಅಂಗ ಭೋಗವಳಿದು ನಿಚ್ಚ ಜಂಗಮಕ್ಕೆ ದಾಸೋಹ ನಡೆಸ ಬೇಕು. ಸಮಾಜರೂಪಿ ಜಂಗಮಕ್ಕೆ ಅರ್ಪಿತವಾಗ ಬೇಕು.ಇಂತಹ ಕಾಯಕ–ದಾಸೋಹ ಜೀವಿ ಸದ್ಭಕ್ತನ ಹೃದಯದಲ್ಲಿ ಅಚ್ಚೊತ್ತಿದಂತೆ ಪರಮಾತ್ಮನು ನೆಲೆಸಿರು ತ್ತಾನೆ ಎಂದು ಶರಣ ಮಾದಾರ ಧೂಳಯ್ಯನವರು ಹೇಳುತ್ತಾರೆ.

# ದೇವರ ನೆನಹು ಮತ್ತು ನಮ್ಮ ಡಾಂಭಿಕತನ

– ಬಸವರಾಜ ಮೋದಿ, ೨೩, ಜಗಜ್ಯೋತಿ, ವಿಶ್ವವಿದ್ಯಾಲಯ ರಸ್ತೆ, ಕಲಬುರ್ಗಿ– ೫೮೫ ೧೦೬

ಜೇಡರ ದಾಸಿಮಯ್ಯ ಆದ್ಯ ವಚಕರಾರರೆಂದು ಪ್ರಖ್ಯಾತನಾದಂತೆ ಅವನ ವಚನಗಳೂ ಅಷ್ಟೇ ಪ್ರಖ್ಯಾತಿ ಪಡೆದಿವೆ, ಸರಳವಾಗಿದ್ದು ಸ್ಪಷ್ಟವಾದ ವಿಚಾರಗಳನ್ನು ಹೊಂದಿವೆ. ಅವು ಜಾನಪದ ದಾಟಿಯನ್ನು ಒಳಗೊಂಡಿದ್ದರೂ ಪ್ರಾಸಬದ್ಧವಾಗಿ ಬಂದಿವೆ. ಕಾವ್ಯಾತ್ಮಕವಾಗಿವೆ. ಈ ಕೆಳಗಿನ ಅವನ ವಚನ ಈ ಎಲ್ಲಾ ಲಕ್ಷಣಗಳನ್ನೊಳಗೊಂಡು ವಿಡಂಬನಾತ್ಮಕವಾಗಿ ಬಂದಿದೆ.

*'ಎಡರಡಸಿದಲ್ಲಿ ಮೃಡ! ನಿಮ್ಮ ನೆನೆವರು*
*ಎಡರಡಸಿದ ವಿಪತ್ತು ಕಡೆಯಾಗಲೊಡನೆ*
*ಮೃಡ ! ನಿಮ್ಮನೆಡಹಿಯೂ ಕಾಣರು! ರಾಮನಾಥ*

ಇದೊಂದು ಮನುಷ್ಯನ ಆಷಾಢಭೂತಿತನ. ಸ್ವಾರ್ಥತನಕ್ಕೆ ಹಿಡಿದ ಕನ್ನಡಿಯಾಗಿದೆ. ಈ ವಚನದ ಅಂತರಾಳಕ್ಕೆ ಇಳಿಯುವುದಕ್ಕಿಂತ ಮುಂಚೆ ಈ ವಚನದ ಹಂದರ ಕುರಿತು ಚಿಂತನೆ ಮಾಡೋಣ. ಈ ವಚನ ದಾಸಿಮಯ್ಯನ ಸಾಹಿತ್ಯ ಕೌಶಲದ ಜೊತೆಗೆ ಅವನ ಲೋಕಾನುಭವವನ್ನೂ ಹೊರಹಾಕುತ್ತದೆ. ಇಲ್ಲಿ ಅವನು ಮಾಡಿದ ಶಬ್ದಗಳ ಬಳಕೆಗಳು ಒಂದಕ್ಕೊಂದು ಪೂರಕವಾಗಿ ಬಂದಿವೆ. ಅವು ಪ್ರಾಸಾನುಸಾರವಾಗಿ ಒಂದಕ್ಕೊಂದಿ ಹುಡುಕಿಕೊಂಡು ಹೊರಹೊಮ್ಮಿವೆ. 'ಎಡರಡಸಿ' ಶಬ್ದಪ್ರಯೋಗವನ್ನು ಅನುಸರಿಸಿ 'ಮೃಡ' ಮತ್ತು 'ಕಡೆ' ಪದಗಳು ಬಂದು ಈ ವಚನಕ್ಕೆ ಕಾವ್ಯಾಂಶ ಕೊಡುತ್ತವೆ. ಮೂರು ವಾಕ್ಯಗಳ ಶಬ್ಧಗಳಲ್ಲಿ ಬರುವ 'ಡ' ಪ್ರತ್ಯಯ ಇಡೀ ವಚನಕ್ಕೆ ಪ್ರಾಸ ಬದ್ಧತೆಯನ್ನು ಕೊಡುತ್ತದೆ. ಕೊನೆಯ ಸಾಲಿನಲ್ಲಿಯ 'ನಿಮ್ಮನೆಡಹಿಯೂ' ಮತ್ತು 'ಕಾಣರು'ವೆಂಬ ಪದಗಳ ಬಳಕೆ ನಮ್ಮ ಗಮನ ಸೆಳೆಯುತ್ತದೆ. ಅಲ್ಲದೇ ಎಡರನ್ನು ಅನುಸರಿಸಿಯೇ 'ಎಡಹಿ' ಶಬ್ಧ ಬಂದು ಪ್ರಾಸಬದ್ಧತೆಯನ್ನು ನೀಡುತ್ತವೆ. ಇದರ ಬದಲಿಗೆ ಬೇರೆ ಯಾವ ಪದ ಪ್ರಯೋಗ (ಉದಾಹರಣೆಗೆ : 'ತಪ್ಪಿಯೂ' 'ಮರೆತೂ' ಮಾಡಿದ್ದರೆ ಈ ಶಬ್ಧದ(ಎಡಹಿಯೂ) ಧ್ವನಿ ಹೊರಡಿಸಲಾರವು. ಅದೇ ರೀತಿ 'ಕಾಣರು' ಶಬ್ದದ ಬದಲಿಗೆ 'ನೆನೆಯರು' ಯೆಂಬ ಪ್ರಾಸಬದ್ಧವಾದ ಶಬ್ದವನ್ನು ದಾಸಿಮಯ್ಯ ಉಪಯೋಗಿಸಬಹುದಾಗಿದ್ದರೂ ಅವನು 'ಕಾಣರು' ವೆಂಬ ಪದ ಪ್ರಯೋಗ ಮಾಡಿ ಇಡೀ ವಚನದ ಅರ್ಥಕ್ಕೆ ಒತ್ತು ಕೊಡುತ್ತಾನೆ. 'ಕಾಣರು'ಯೆಂದ ಕೂಡಲೆ ಉದ್ದೇಶಪೂರ್ವಕವಾಗಿ ತಪ್ಪಿಸಿಕೊಂಡು, ತಲೆಮರೆಸಿಕೊಂಡು ಹೋಗುವವರೆಂಬ ಒಳಾರ್ಥವನ್ನು ನೀಡುತ್ತದೆ.

ಮನುಷ್ಯ, ಪ್ರಾಣಿಲೋಕದಲ್ಲೇ ಬುದ್ಧಿವಂತನೆಂದು, ಪರಿಗಣಿಸಲ್ಪಟ್ಟಿದ್ದರೂ ಅವನಷ್ಟು ಸ್ವಾರ್ಥಿಪ್ರಾಣಿ ಜಗತ್ತಿನಲ್ಲಿ ಯಾವುದೂ ಇಲ್ಲ. ಅವನ ಸಂಪೂರ್ಣ ಜೀವನ, ಸ್ವಾರ್ಥದಿಂದಲೇ ಕೂಡಿರುತ್ತದೆ. ಸಮಾಜದಲ್ಲಿಯ ಇನ್ನಿತರರೊಂದಿಗೆ ಅವರು ಅವನ ಹೆಂಡತಿಯೇ, ಇರಲಿ (ಗಂಡನೇ ಇರಲಿ!) ಮಕ್ಕಳೇ ಇರಲಿ ಯಾರೇ ಇರಲಿ, ಅವನು ಸ್ವಾರ್ಥದ ನೆಲೆಗಟ್ಟಿನ ಮೇಲೆಯೇ ವ್ಯವಹರಿಸುತ್ತಾನೆ. ಅವನ ಮಾತು ಕಥೆ, ಆಚಾರ ವಿಚಾರ, ನಡೆ–ನುಡಿಗಳೆಲ್ಲವೂ ಸ್ವಾರ್ಥದಿಂದ ತುಂಬಿರುತ್ತದೆ. ಇಷ್ಟೇ ಅಲ್ಲ ಅವನು ತನ್ನ ಸ್ವಾರ್ಥ ಜೀವನದ ಸುಖಕ್ಕಾಗಿ ಸುತ್ತಲಿನ ಪ್ರಕೃತಿಯನ್ನು ಬಳಸಿಕೊಳ್ಳುತ್ತಾನೆ. ತನ್ನ ಪರಿಸರವನ್ನೇ ಹಾಳು ಮಾಡುತ್ತಾನೆ. ಮನುಷ್ಯನ ಇಂತಹ ಸ್ವಾರ್ಥಪೂರಿತ ವ್ಯವಹಾರ ದೇವರನ್ನೂ ಬಿಟ್ಟಿಲ್ಲವೆಂಬುದನ್ನು ದಾಸಿಮಯ್ಯ ಮೇಲಿನ ವಚನದಲ್ಲಿ ಹೇಳುತ್ತಿದ್ದಾನೆ. ಎಡರಡಸಿದಲ್ಲಿ ಅಂದರೆ ನಮ್ಮ ಮೇಲೆ ವಿರೋಧ, ಕಷ್ಟ, ತೊಂದರೆ, ಬಡತನ, ಅಡಚಣೆಗಳು (ಎಡರುಗಳು) ಒತ್ತಿಕೊಂಡು ಬಂದಾಗ ದೇವರಿಗೆ ಶರಣಾಗುವೆವು. ದೇವರನ್ನು ಹಲವಾರು ವಿಧಗಳಲ್ಲಿ ಅರ್ಚನೆ ಮಾಡುವೆವು. ಅವನ ಕರುಣೆಗಾಗಿ ವಿವಿಧ ರೀತಿಯ ಹರಕೆಗಳನ್ನು ಸಲ್ಲಿಸುವೆವು. ಪ್ರಾಣಿ ಬಲಿಯನ್ನೂ ನೀಡುವೆವು. ಬಂಗಾರ–ಬೆಳ್ಳಿ ವಜ್ರ ವೈಢೂರ್ಯಗಳನ್ನು ಅರ್ಪಿಸಿ ದೇವರನ್ನು ಭ್ರಷ್ಟನನ್ನಾಗಿ ಮಾಡುವೆವು. ಹಲವಾರು ರೀತಿಯ ಅರ್ಚನೆ ಆರಾಧನೆಗಳನ್ನು ಮಾಡುವೆವು. ಧ್ಯಾನ, ತಪ–ಜಪ ಉಪವಾಸಾದಿಗಳನ್ನು ವ್ರತಗಳನ್ನು ಕೈಗೊಳ್ಳುವೆವು. ಆದರೆ ಈ ಎಲ್ಲಾ ಎಡರುಗಳಿಂದಾಗುವ ಕೇಡು ಆಪತ್ತುಗಳು ಸರಿದ ತಕ್ಷಣವೇ ನಾವು ತಪ್ಪಿಯೂ(ಎಡಹಿಯೂ) ದೇವರ ಕಡೆಗೆ ದೃಷ್ಟಿ ಹಾಯಿಸುವುದಿಲ್ಲವೆಂದು ಜೇಡರ ದಾಸಿಮಯ್ಯ ಮೇಲಿನ ವಚನದಲ್ಲಿ ವಿಡಂಬಿಸುತ್ತಾನೆ.

ಮನುಷ್ಯನ ಈ ರೀತಿಯ 'ಸ್ವಾರ್ಥಪೂರಿತ ಭಕ್ತಿಯ ಬಗ್ಗೆ ಬಸವಣ್ಣನೂ ತನ್ನ ವಚನವೊಂದರಲ್ಲಿ–' ಹೊರಗಣ ಕೆರಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ'ವೆಂದು ಬಹಳ ಪರಿಣಾಮಕಾರಿಯಾಗಿ ವಿಡಂಬಿಸುತ್ತಾನೆ. ದೇವರ ದರ್ಶನಕ್ಕೆಂದು ದೇವಾಲಯಗಳಿಗೆ ಹೋದವರ ಧ್ಯಾನ ಹೊರಗೆ ಬಿಟ್ಟ ಚಪ್ಪಲಿಗಳ ಮೇಲಿರುತ್ತದೆಯೇ ಹೊರತಾಗಿ ದೇವರ ಮೇಲಿರುವುದಿಲ್ಲ. ದೇವರೊಂದಿಗಿನ ಮನುಷ್ಯನ ವ್ಯವಹಾರ ಈ ರೀತಿಯದಾಗಿದ್ದರೆ ಮನುಷ್ಯ ಮನುಷ್ಯರ ಮಧ್ಯದಲ್ಲಿನ ವ್ಯವಹಾರಗಳು ಎಷ್ಟು ಸ್ವಾರ್ಥಪೂರಿತವಾಗಿರುತ್ತವೆಂಬುದನ್ನು ಊಹಿಸಲೂ ಸಾಧ್ಯವಿಲ್ಲ. ಸ್ವಾರ್ಥವೆಂಬ ಗುಣ ಮನುಷ್ಯನೊಂದಿಗೆ ಹುಟ್ಟಿಕೊಂಡು ಬರುತ್ತದೆ. ಈ ಸ್ವಾರ್ಥವೇ ಮನುಷ್ಯ ಸ್ವಾರ್ಥವನ್ನು ಮೆಟ್ಟಿ ನಿಂತರೆ ಅವನ ಎಲ್ಲಾ ಸಮಸ್ಯೆಗಳು ತಂತಾನೆ ಬಗೆ ಹರಿಯುವುವು. ಸ್ವಾರ್ಥವನ್ನು ಮೆಟ್ಟಿ ನಿಲ್ಲಬೇಕಾದರೆ ಮನುಷ್ಯ ಸತತ ಪ್ರಯತ್ನ ಮಾಡಬೇಕಾಗುತ್ತದೆ; ಜೇಡರ ದಾಸಿಮಯ್ಯ, ಬಸವಣ್ಣರಂಥ ಮಹಾಪುರುಷರ ನುಡಿಗಳನ್ನು ಮೆಲಕು ಹಾಕಬೇಕಾಗುತ್ತದೆ.

ಮನುಷ್ಯನಿಂದ ಸ್ವಾರ್ಥ ಅಳಿದುಹೋದರೆ ನಮ್ಮ ಭೂಮಿಯೇ ಸ್ವರ್ಗಲೋಕವಾಗುವುದು. ಆದರೆ ಇದು ಸಾಧ್ಯವೇ? ಸಾಧ್ಯ! ಆದರೆ ಸತತ ಪ್ರಯತ್ನ ಅಗತ್ಯ.

*

# ಆತ್ಮಸಾಕ್ಷಿ

ಆತ್ಮಸಾಕ್ಷಿಯು ನಿಮ್ಮ ಹೃದಯ ಗಹ್ವರದಲ್ಲಿ ಉರಿಯು ತ್ತಿರುವ ಆತ್ಮ ಜ್ಯೋತಿ. ಸತ್ಯ ಮತ್ತು ಪವಿತ್ರತೆಗಳ, ದೈವ ನಿಯಮಗಳ ಕರ್ತನಾದ ಅಂತರಾತ್ಮನ ಇರುವಿಕೆಯನ್ನು ನಿಮಗೆ ತಿಳಿಸತಕ್ಕ ಪರಂಜ್ಯೋತಿಯ ಒಂದು ಸಣ್ಣ ಕಿಡಿಯೇ ಅದು. ಅದರ ಯಜಮಾನನಾದ ಪರಮಾತ್ಮನ ಇಚ್ಛೆಗೆ ವ್ಯತಿರಿಕ್ತವಾದ ನೀವು ಕಾಯಾ–ವಾಚಾ–ಮನಸಾ ಏನನ್ನಾ ದರೂ ಮಾಡಿದರೆ, ಅದು ತನ್ನ ಪ್ರತಿಭಟನೆಯನ್ನು ಸೂಚಿಸುತ್ತದೆ.

ನೀವು ನೈತಿಕ ಆಂದೋಳನದಲ್ಲಿ ಸಿಕ್ಕಿರುವಾಗ, ಆಗ ಬಹುದು ಅಥವಾ ಬೇಡ ಎಂದು ಹೇಳತಕ್ಕ ಅಂತರ್ವಾಣಿಯೇ ಆತ್ಮಸಾಕ್ಷಿ. ಅದು ಒಂದು ಕಾರ್ಯವನ್ನು ನೀವು ಮಾಡ ಬಹುದು ಅಥವಾ ಮಾಡಕೂಡದು ಎಂದು ಅಂತರಂಗದಿಂದ ಬರುವ ಆತ್ಮನ ವಾಣಿ. ಆತ್ಮಸಾಕ್ಷಿಯು ಅಂತರಂಗದಲ್ಲಿ ಇದ್ದುಕೊಂಡು ಎಚ್ಚರಿಕೆ ಕೊಡತಕ್ಕವನು.

ಆತ್ಮಸಾಕ್ಷಿಯು ಸತ್ಯದ ಒಂದು ರೂಪ. ಅದು ನಮ್ಮ ಸ್ವಂತ ಕಾರ್ಯಗಳು ಮತ್ತು ಭಾವನೆಗಳು ಸರಿಯೇ ಅಥವಾ ತಪ್ಪೇ ಎಂಬುದರ ತಿಳುವಳಿಕೆ. ಅದು ಕಾರ್ಯಗಳನ್ನು ತೂಕ ಮಾಡತಕ್ಕ ಸೂಕ್ಷ್ಮವಾದ ತಕ್ಕಡಿ. ಅದು ಯುಕ್ತ–ಅಯುಕ್ತಗಳನ್ನು ನಿರ್ಣಯಿಸುವ ಶಕ್ತಿ ಅಥವಾ ಸಿದ್ಧಾಂತ. ಅದು ಮಾರ್ಗದರ್ಶನ ಅಂತರ್ವಾಣಿ. ತನ್ನ ಕರ್ತವ್ಯ ಜ್ಞಾನವೇ ಆತ್ಮಸಾಕ್ಷಿ. ಧರ್ಮ ಭೀರುತ್ವವೇ ಆತ್ಮಸಾಕ್ಷಿ. ಆತ್ಮಸಾಕ್ಷಿಯು ಮೌನಿಯಾಗಿರುವ ಗುರುವಿನಂತೆ.

ಆತ್ಮಸಾಕ್ಷಿಯು ಒಂದು ನೈತಿಕ ಶಕ್ತಿ. ಯಾವುದು ಸರಿ ಮತ್ತು ಯಾವುದು ತಪ್ಪು ಎಂಬುದನ್ನು ಅಲ್ಲಲ್ಲೇ ನಿರ್ಣಯಿಸಿ ತಿಳಿಸತಕ್ಕ ಅತಿ ಸೂಕ್ಷ್ಮವಾದ ಸಲಕರಣೆ ಅಥವಾ ಅರಿವು ಅದು. ಅದು ಶ್ರೇಯೋಮಾರ್ಗವನ್ನು ಸೂಚಿಸತಕ್ಕಂತಹ ನಿಶ್ಯಬ್ದವಾದ ಅಂತರ್ವಾಣಿ. ಅದು ವಾಸ್ತವವಾಗಿಯೂ ಅತ್ಯಂತ ಸೂಕ್ಷ್ಮವು, ಅದರ ಕುತ್ತಿಗೆಯನ್ನು ಹಿಸುಕಿ ಸಾಯಿಸುವುದು ಅತಿ ಸುಲಭ. ಅದು ಸ್ಪಷ್ಟವಾಗಿರುತ್ತದೆ. ಅದನ್ನು ತಪ್ಪಾಗಿ ತಿಳಿಯಲು ಸಾಧ್ಯವಿಲ್ಲ.

ಆತ್ಮಸಾಕ್ಷಿಯು ತರ್ಕಕ್ಕೆ ಮೀರಿದುದು. ಸೌಶೀಲ್ಯದ ಆಳಕ್ಕೆ ಮುಳಗಬೇಕು ಅಥವಾ ದೌರ್ಜನ್ಯದ ಮಟ್ಟವನ್ನು ಬಿಟ್ಟು ಗಗನಕ್ಕೆ ಏರಬೇಕು ಎಂಬ ವಿಷಯದಲ್ಲಿ ಹಠಾತ್ತನೆ ಬರುವ ಕಟ್ಟಾಜ್ಞೆ ಅದು. ಸತ್ಯ, ಧೈರ್ಯ ಮತ್ತು ನ್ಯಾಯಗಳು ಆತ್ಮಸಾಕ್ಷಿಗೆ ಆಭರಣಗಳು.

ಆತ್ಮಸಾಕ್ಷಿಯು ತನ್ನ ನಡತೆ ಅಥವಾ ಭಾವನೆಗಳ ಶೀಲ–ಅಶ್ಲೀಲತೆಗಳ ಅರಿವು ಮತ್ತು ಸತ್ಕಾರ್ಯಗಳನ್ನೇ ಮಾಡುತ್ತಾ, ಸತ್ಪುರುಷರೇ ಆಗಿ ಇರಬೇಕೆಂಬ ಒತ್ತಾಯದ ಭಾವನೆ.

ಆತ್ಮಸಾಕ್ಷಿಯು ಭಗವಂತನ ಅನಾದಿಯಾದ ನ್ಯಾಯಪರತೆಯನ್ನು ತೋರಿಸತಕ್ಕ ಉತ್ತರಮುಖಿ.

ಆತ್ಮಸಾಕ್ಷಿಯು ನಿಮ್ಮ ಗುರು. ಅದು ಆ ಕಾರ್ಯವನ್ನು ಮಾಡು, ಇದು ಸರಿ ಎಂದು ಆಜ್ಞಾಪಿಸುತ್ತದೆ ಮತ್ತು ಇದು ಅಕಾರ್ಯ. ಇದನ್ನು ಮಾಡಬೇಡ ಎಂದು ಎಚ್ಚರಿಕೆಯನ್ನು ಕೊಡುತ್ತದೆ.

ಆತ್ಮಸಾಕ್ಷಿಯು ಬಾರಿ ಲೆಕ್ಕದ ಪುಸ್ತಕ. ನಿಮ್ಮ ಅಪರಾಧ ಗಳೆಲ್ಲಾ ಅದರಲ್ಲಿ ಬರೆದು ಭದ್ರಮಾಡಲ್ಪಟ್ಟಿರುತ್ತವೆ. ಅದು ಭಯಂಕರವಾದ ಸಾಕ್ಷಿ.

ಆತ್ಮಸಾಕ್ಷಿಯು ಅತ್ಯುತ್ಕೃಷ್ಟವಾದ ನ್ಯಾಯ ಮಂತ್ರಿಯು. ಅದು ಬೆದರಿಸುತ್ತದೆ, ಭಾಷೆ ಕೊಡುತ್ತದೆ. ಬಹುಮಾನ ಕೊಡುತ್ತದೆ ಮತ್ತು ಶಿಕ್ಷೆಯನ್ನು ಕೊಟ್ಟು, ಎಲ್ಲರನ್ನೂ ತನ್ನ ಹತೋಟಿಯಲ್ಲಿ ಇಟ್ಟುಕೊಂಡಿರುತ್ತದೆ. ನಿಮ್ಮ ಆತ್ಮಸಾಕ್ಷಿಯು ಒಂದು ಸಲ ಕುಟುಕಿದರೆ, ಅದು ಎಚ್ಚರಿಕೆ; ಎರಡು ಸಲ ಕುಟುಕಿದರೆ ಅದು ಶಿಕ್ಷೆ ವಿಧಿಸಿದಂತೆ. ಆತ್ಮಸಾಕ್ಷಿಗೆ ವಿರುದ್ಧವಾಗಿ ನಡೆಯುವುದೆಂದರೆ, ನ್ಯಾಯಕ್ಕೆ ಮತ್ತು ದೈವ ನಿಯಮಕ್ಕೆ ವಿರುದ್ಧವಾಗಿ ನಡೆದಂತೆ.

–ಶ್ರೀ ಸ್ವಾಮಿ ಶಿವಾನಂದರು

# ಶರಣ ಸಂಸ್ಕೃತಿ – ಜಾಗತೀಕರಣ

– ಡಾ|| ವಿಜಯಲಕ್ಷ್ಮಿ ಬಾಳೇಕುಂದ್ರಿ, ಬನ್ನೇರುಘಟ್ಟ, ೯ನೇ ಬ್ಲಾಕ್, ಜಯನಗರ, ಬೆಂಗಳೂರು-೬೯.

ವಿಶ್ವವೇ ಒಂದು ಕುಟುಂಬ ಎಂದು ಅನಾದಿಕಾಲದಿಂದಲೂ ನಂಬಿದ್ದ ಭಾರತೀಯರು ಪರಿಣಾಮವನ್ನು ಅರಿಯದೇ ಜಾಗತೀಕರಣವನ್ನು ಸ್ವಾಗತಿಸಿದರು. ಜಾಗತೀಕರಣದ ವರ್ಣ, ವರ್ಗ, ಲಿಂಗಭೇದವಿಲ್ಲದೇ, ಉದ್ಯೋಗ ದೊರೆತು, ದೇಶ ವಿದೇಶಗಳ ಗಡಿ ದಾಟುವ ಸದವಕಾಶವೆಂದು ಸಂತಸ ಪಟ್ಟರು. ಜನರಿಗೆ ಉದ್ಯೋಗ ಒದಗಿಸುವ ಭರದಲ್ಲಿ ಬೃಹತ್ ಕೈಗಾರಿಕೆಗಳು ತಲೆ ಎತ್ತಿದವು. ಬಹುದೇಶ ಬಂಡವಾಳ ಶಾಹಿಗಳು ಬಂಡವಾಳ ಹೂಡಿದಾಗ ಸರಕಾರ ಮತ್ತು ಸಮಾಜ ಅವನ್ನು ಸ್ವಾಗತಿಸಿದುವು. ಆಗ ಅವರಿಗೆ ಬಹುರಾಷ್ಟ್ರೀಯ ಕಂಪನಿಗಳಿಂದ ಮುಂದಾಗಬಹುದಾದ ಅನಾಹುತ ಕಣ್ಣಿಗೆ ಕಾಣಲಿಲ್ಲ. 'ದುಡ್ಡೇ ದೊಡ್ಡಪ್ಪ' ಎಂದು ಗಾಥೆ ಮಾತು ಹೇಳಿದಂತೆ ಜನರಿಗೆ ಜಾಗತೀಕರಣದಿಂದ ಬಂದ ದುಡ್ಡು ದೊಡ್ಡದಾಗಿ ಕಾಣಿಸಿತು. ಆದರೆ ಅದರೊಂದಿಗೆ ಜನರು ತಮ್ಮ ಮನದ ದೊಡ್ಡತನ ಕಳೆದುಕೊಳ್ಳುತ್ತಾರೆ ಎಂಬ ಭಾವನೇ ಬರದೇ ಹೋಯಿತು. ಜಗತ್ತಿನಲ್ಲಿ ಸಿಗುವ ಪ್ರತಿಯೊಂದು ವಸ್ತು ಬೇಡಿದಾಗ ಮನೆ ಬಾಗಿಲಲ್ಲಿ ಸಿಗುತ್ತದೆ ಎಂಬ ಸಂಭ್ರಮದಲ್ಲಿ ನಮ್ಮ ಕುಶಲ ಕಾರ್ಮಿಕರಿಗೆ ಅನ್ಯಾಯವಾಗುತ್ತದೆ ಎಂಬ ಯೋಚನೆ ಬರಲೇ ಇಲ್ಲ. ಹೀಗೆ ನಮ್ಮ ಮನೆಯ ಅಂಗಳದಲ್ಲಿ ತಂಗಾಳಿಯಾಗಿ ಸೂಸಬೇಕಾದ ಜಾಗತೀಕರಣ ಸುಂಟರಗಾಳಿಯಾಗಿ ನಮ್ಮ ಸಂಸ್ಕೃತಿಯನ್ನೇ ಬುಡಮೇಲು ಮಾಡುತ್ತದೆಂದು ಯಾರೂ ಚಿಂತಿಸಲಿಲ್ಲ.

ಹಾಗಾದರೆ ಜಾಗತೀಕರಣ ಎಂದರೇನು? ಜಾಗತೀಕರಣ ಎಂದರೆ ವ್ಯಾಪಾರಕ್ಕಾಗಿ ಮುಕ್ತ ಆಮದು ಮತ್ತು ರಫ್ತು ವ್ಯವಸ್ಥೆ ಈ ಮುಕ್ತ ಆರ್ಥಿಕ ವ್ಯವಸ್ಥೆಯ ಜೊತೆಗೆ ಮುಕ್ತ ಆಚಾರ, ವಿಚಾರ ಉಡುಗೆ ತೊಡುಗೆಗಳ ವಿಲೇವಾರಿ ಆಗಿ ಅದರ ಪರಿಣಾಮವಾಗಿ ಆಸೆ ಆಮಿಷಗಳಿಂದ ಕೂಡಿದ ಸ್ವೇಚ್ಛಾಚಾರದ ಅಸಭ್ಯ ಸಮಾಜ ತಲೆ ಎತ್ತಿದೆ. ಜಾಗತೀಕರಣದಿಂದ ಆರ್ಥಿಕ ಸುಧಾರಣೆಯಾಗಿದೆ. ಹಣದಿಂದ ಕೊಂಡುಕೊಳ್ಳಬಹುದಾದ ಎಲ್ಲಾ ವಸ್ತುಗಳೂ ಲಭ್ಯವಾಗಿವೆ. ಬದುಕು ಹಣವಂತಿಕೆಯಿಂದ ಹಸನಾಗಿದೆ. ಆದರೆ ಬಾಳು ಬರಡಾಗಿದೆ. ಬದುಕಿನ ಮಟ್ಟ ಎಷ್ಟು ಮೇಲೆ ಹೋಗಿದೆಯೋ ಅದಕ್ಕಿಂತ ಹೆಚ್ಚು ನಮ್ಮ ಜೀವನದ ಮೌಲ್ಯಗಳು ಕೆಳಗೆ ಕುಸಿದಿವೆ. ಕಾರಣ ಜಾಗತೀಕರಣದ ಪ್ರಭಾವದಿಂದ ಎಲ್ಲವೂ ವ್ಯಾಪಾರೀಕರಣಗೊಂಡಿದೆ. ಹಣವೇ ಸರ್ವಸ್ವವಾಗಿದೆ.

ಜನರಿಗೆ ಕೈತುಂಬ ಹಣ ಬರುವ ಕೆಲಸಗಳು ಸಿಗುತ್ತಾ ಇವೆ. ಅದರೆ ಅವರಲ್ಲಿ ವೃತ್ತಿಯಲ್ಲಿರಬೇಕಾದ ಕಾಯಕ ಪ್ರವೃತ್ತಿ ಕಾಣುತ್ತಾ ಇಲ್ಲ. ಉದಾಹರಣೆಗೆ ಒಂದು ಕಛೇರಿಯಲ್ಲಿ ಬೆಳಿಗ್ಗೆ ಬಂದು ಸಹಿ ಹಾಕಿದ ತಕ್ಷಣ ಕಾಫಿಗೆ ಹೋಗೋದು ಅದಾದ ಮೇಲೆ ಸಿಗರೇಟು ಸೇದುತ್ತಾ ಹಾಳು ಹರಟೆ, ಅಲ್ಲಿ ಇಲ್ಲಿ ಓಡಾಡಿಕೊಂಡು ಕಾಲ ಕಳೆದು ಸಂಜೆ ಸಮಯಕ್ಕೆ ಸರಿಯಾಗಿ ಮನೆಗೆ ಹೋಗುತ್ತಾರೆ. ಹೀಗೆ ಊಟ ಮಾಡುವ ಒಬ್ಬ ಆಧುನಿಕ ಭೂಪನಿಗೆ ಒಬ್ಬ ವಯೋವೃದ್ಧರು ಕೇಳಿದರು 'ಏನಪ್ಪ ಅಷ್ಟೊತ್ತಿಂದ ಕಾಯ್ತಾ ಇದ್ದೀನಿ ಸ್ವಲ್ಪ ನನ್ನ ಕೆಲಸ ಮಾಡಬಾರದಾ? ಅದಕ್ಕೆ ಅವನು ಉತ್ತರಿಸಿದ್ದು ನೋಡಿ ಸ್ವಾಮಿ ನನ್ನ ಕೆಲಸದ ಆರ್ಡರ್‌ನಲ್ಲಿ ತಿಂಗಳಿಗೆ ಇಷ್ಟು ಸಂಬಳ ಅಂತ ಇದೆ. ಆದರೆ ಆ ಸಂಬಳಕ್ಕೆ ಇಷ್ಟು ಕೆಲಸ ಮಾಡಬೇಕೂ ಅಂತ ಎಲ್ಲೂ ಇಲ್ಲ' ಅಂದನಂತೆ. ಅಂದರೆ ಲೆಕ್ಕಹಾಕಿ ಹೊಟ್ಟೆಪಾಡಿಗೆ ಕೆಲಸ ಮಾಡುವ ಜನ ಯಾವಸ್ಥಿತಿಗೆ ಇಳಿದಿದ್ದಾರೆ. ಆದರೆ ಶರಣ ಸಂಸ್ಕೃತಿಯಲ್ಲಿ ನಾವು ಮಾಡುವ ಪ್ರತಿಯೊಂದು ಕೆಲಸವೂ ದೈವಸ್ವರೂಪವಾದ ಸಮಾಜಕ್ಕೆ ಎಂದು ಆಧ್ಯಾತ್ಮೀಕರಣಗೊಳಿಸಿ ಅದಕ್ಕೆ 'ಕಾಯಕ' ಎಂದರು. ಶರಣ ಸಂಸ್ಕೃತಿಯಲ್ಲಿ ಯಾವ ವೃತ್ತಿಯಲ್ಲೂ ಮೇಲಲ್ಲ, ಕೀಳಲ್ಲ, ಕುಂಬಾರ, ಸಮಗಾರ. ಮೇದಾರ, ಗಾಣಿಗನೆಂಬ ತಾರತಮ್ಯವಿಲ್ಲ.

ಆವ ಕಾಯಕವ ಮಾಡಿದರೂ ಒಂದೇ ಕಾಯಕವಯ್ಯಾ ಎಂದರು ಶರಣರು. ಶರಣ ಶ್ರೇಷ್ಠ ಅಲ್ಲಮಪ್ರಭುಗಳು ಹೇಳುತ್ತಾರೆ–

*ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ*
*ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯೆಲ್ಲ*
*ಮಣ್ಣು ಮಾಯೆಯೆಂಬರು ಮಣ್ಣೂ ಮಾಯೆಯೆಲ್ಲ*
*ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ*

ಅದೆಷ್ಟು ಸತ್ಯ ಹೊನ್ನು, ಹೆಣ್ಣು, ಮಣ್ಣಿನ ತಪ್ಪಲ್ಲ, ತಪ್ಪಿರುವುದು ನಮ್ಮ ಮನದಲ್ಲಿರುವ ಆಸೆಯಲ್ಲಿ. ನಮ್ಮ ಸುತ್ತ ಮುತ್ತ ನೋಡಿದರೆ ಆಸೆ ಅಮಿಷಗಳ ಜೊತೆಗೆ





ರೋಷ ದ್ವೇಷಗಳು ಹೆಚ್ಚುತ್ತವೆ. ಕಲಿತವರು ಕಲಿಯುವದವರು, ಕೆಲಸ ಇದ್ದವರು, ಇಲ್ಲದವರು, ಗತಿಕರು, ನಿರ್ಗತಿಕರು ಎನ್ನದೇ ಸಮಾಜದಲ್ಲಿ ಪ್ರತಿಯೊಬ್ಬರೂ ಸಿಕ್ಕಿದ್ದನ್ನು ಬಾಚಿಕೊಳ್ಳುವುದರಲ್ಲೇ ಇದ್ದಾರೆ. ಹೆಂಡತಿಯೇ ಗಂಡನಿಗೆ ಹಣಮಾಡಲು ಪ್ರೇರೇಪಿಸುವ ಇಂದು, ನಾವು ಆಯ್ದಕ್ಕಿ ಮಾರಯ್ಯನ ಸತಿ ಲಕ್ಕಮ್ಮ ತನ್ನ ಗಂಡನಿಗೆ ಬುದ್ಧಿ ಹೇಳುವುದರಿಂದ ಕಲಿಯಬೇಕಾಗಿದೆ.

*ಆಸೆಯೆಂಬುದು ಅರಸಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯಾ?*
*ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗೆ ಉಂಟೆ ಅಯ್ಯಾ*
*ಈಸಕ್ಕಿಯಾಸೆ ನಿಮಗೇಕೆ? ಈಶ್ವರನೊಪ್ಪ*
*ಮಾರಯ್ಯಪ್ರಿಯ ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯ?*

ಆಸೆಯಿಂದ ಆಯ್ದು ತಂದ ಹೆಚ್ಚು ಅಕ್ಕಿ ಬೇಡ ಎನ್ನುವ ಸತಿ ಲಕ್ಕಮ್ಮನಂತೆ ಇಂದು ಮಹಿಳೆಯರು ಆಗದೇ ಇದ್ದದ್ದರಿಂದ ಜನರಲ್ಲಿ ಆಸೆ, ದುರಾಸೆಯ ಜೊತೆಗೆ, ರೋಷ ದ್ವೇಷ ಸೇರಿ ಮತಾಂಧರಾಗುತ್ತಿದ್ದಾರೆ. ಇಂಥ ಸಮಯದಲ್ಲಿ ನಾವು ಶಿವಯೋಗಿಯವರನ್ನು ನೆನೆಯ ಬೇಕು. ಒಂದು ಸಲ ಶಿವಯೋಗಿಗಳು ಶಿವಪೂಜೆ ಮುಗಿಸಿಕೊಂಡು ಬರುವಾಗ ಹೊರಗೆ ಕಾಲು ಇಡುತ್ತಿದ್ದಂತೆ 'ಅಯ್ಯೋ ಚೇಳು, ಚೇಳು ಉರಿ ಎಂದು' ಜೋರಾಗಿ ಉದ್ಗಾರ ತೆಗೆದರಂತೆ. ಭಯದಿಂದ ಕೋಲು ಕಲ್ಲಿ ಎತ್ತಿಕೊಂಡು ಬಂದ ಶಿಷ್ಯರು ನೋಡಿದರೆ ಅಲ್ಲಿ ಚೇಳು ಇರಲಿಲ್ಲ. ಬದಲು ಚಿನ್ನದ ನಾಣ್ಯಗಳಿದ್ದವಂತೆ. ಚಕಿತರಾದ ಶಿಷ್ಯರು ಶಿವಯೋಗಿಗಳವರನ್ನು ನೋಡಿದರು. ಕಾಶ್ಮೀರದಿಂದ ಬಂದ ಶಿವಭಕ್ತರು ಚಿನ್ನದ ನಾಣ್ಯಗಳನ್ನು ದಕ್ಷಿಣೆಯಂತೆ ತಟ್ಟೆಯಲ್ಲಿ ಇಟ್ಟಿದ್ದರು. ಆಗ ಶಿವಯೋಗಿಗಳು ಶಿಷ್ಯರಿಗೂ ಮತ್ತು ಭಕ್ತರಿಗೂ ಉಪದೇಶ ಮಾಡಿದರು. 'ಹಾವು ಚೇಳಿನ ನಂಜನ್ನು ಇಳಿಸಬಹುದು. ಆದರೆ ಐಶ್ವರ್ಯವಂತ ಅಹಂಕಾರದ ನಂಜನ್ನು ಇಳಿಸುವುದು ಕಷ್ಟ'

ಆದರೆ ಇಂದು ಆಸೆಯಿಂದ ಕೂಡಿಟ್ಟ ಹಣವನ್ನು ರಕ್ಷಿಸುವ ಚಿಂತೆಯಲ್ಲಿ ಜನ ಸಾಯುತ್ತಿದ್ದಾರೆ. ಚಿಂತೆಗಳ ನಾನಾ ಕಾರಣಗಳನ್ನು ಅಂಬಿಗರ ಚೌಡಯ್ಯ ಹೀಗೆ ವಿವರಿಸುತ್ತಾರೆ–

*ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವ ಚಿಂತೆ*
*ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರ ಚಿಂತೆ*
*ಹೆಂಡಿರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ*
*ಬದುಕಾದರೆ ಕೇಡಿನ ಚಿಂತೆ, ಕೇಡಾದರೆ ಮರಣದ ಚಿಂತೆ*
*ಇಂತಿ ಹಲವು ಚಿಂತೆಯಲ್ಲಿ ಇಪ್ಪವರನು ಕಂಡೆನು*
*ಶಿವನ ಚಿಂತೆಯಲ್ಲಿದ್ದವರೊಬ್ಬರನೂ ಕಾಣೆನೆಂದಾತ*
*ಅಂಬಿಗರ ಚೌಡಯ್ಯ*

ಚಿಂತೆಗೂ ಚಿತೆಗೂ ಕೇವಲ ಒಂದು ಸೊನ್ನೆಯ ವ್ಯತ್ಯಾಸ. ಚಿತೆ ಸತ್ತವರನ್ನು ಸುಟ್ಟರೆ ಚಿಂತೆ ಬದುಕಿದವರ ಮನಸ್ಸನ್ನು ಸುಡುತ್ತದೆ. ಆದ್ದರಿಂದ ವಿದೇಶದಲ್ಲಿ ಚಿಂತೆ ಮಾಡುವವರಿಗೆ Stress Management ನಿಂದ ಸಾಯುವವರ ಸಂಖ್ಯೆಯನ್ನು ಕಡಿಮೆ ಮಾಡುತ್ತಿದ್ದಾರೆ. ಅಲ್ಲಿ ಭಾರತೀಯ ಪದ್ಧತಿಯ meditation ಕೇಂದ್ರ ಪ್ರಾರಂಭಿಸುತ್ತಿದ್ದಾರೆ. ಆದರೆ ವ್ಯರ್ಥ ಚಿಂತೆ ಬಿಟ್ಟು ಶಿವನ ಚಿಂತೆ ಎಂದರೆ ಧ್ಯಾನ ಮಾಡುವುದಕ್ಕಿಂತ ಉತ್ತಮ stress management ಇನ್ನೊಂದಿಲ್ಲ.

ಹಾ ನನ್ನ ಗಂಡ ಹೆಂಡಿರು ರೋಗಿಗಳ ಮಾತು ಆಡುತ್ತಿದ್ದಂತೆ ನೆನಪಾಯಿತು. ಜಾಗತೀಕರಣದ ಪರಿಣಾಮವಾಗಿ ದಾಂಪತ್ಯ ಜೀವನ ಹದಗೆಡುತ್ತದೆ, ವಿವಾಹ ವಿಚ್ಛೇದನ ಹೆಚ್ಚುತ್ತಿವೆ. ನಾನು ಹೆಚ್ಚು ನೀನು ಹೆಚ್ಚು ಎನ್ನುವ ಗಂಡ ಹೆಂಡಿರ ಪೈಪೋಟಿಯಲ್ಲಿ ಮಕ್ಕಳು ಬಡವಾಗುತ್ತಿದ್ದಾರೆ. ಆದರೆ ನಮ್ಮ ಶರಣ ಸಂಸ್ಕೃತಿ 'ಉಭಯ ಪ್ರಧಾನ' ಕುಟುಂಬ ಪದ್ಧತಿ. ಅದರಲ್ಲಿ ಸತಿಪತಿಯರಿಬ್ಬರೂ ಸರಿಸಮಾನ.

*ಕೇಳಿರಯ್ಯ ಮಾನವರೆ, ಗಂಡ ಹೆಂಡಿರ ಮನಸ್ಸು ಒಂದಾಗಿದ್ದರೆ*
*ದೇವರ ಮುಂದೆ ನಂದ ದೀವಿಗೆಯ ಮುಡಿಸಿದ ಹಾಗೆ*
*ಗಂಡ ಹೆಂಡಿರ ಮನಸ್ಸು ಬೇರಾದರೆ*
*ಗಂಜಳದೊಳಗೆ ಹಂದಿ ಹೊರಳಾಡಿ*
*ಒಂದರ ಮೇಲೊಂದು ಬಂದು ಮೂಸಿದ ಹಾಗೆ*

ಎಂದು ಅಂಬಿಗರ ಚೌಡಯ್ಯ ಅನ್ಯೋನ್ಯ ದಾಂಪತ್ಯದ ಮಹತ್ವ ತಿಳಿಸುತ್ತಾರೆ. ಅಷ್ಟೇ ಅಲ್ಲ, ಹೆಣ್ಣನ್ನು ದೇವರ ಸಮನಾಗಿ ನೋಡುವ ಸಲಹೆ ಇಂದಿಗೂ ಸಲ್ಲುತ್ತದೆ.

*ತಾ ಮಾಡಿದ ಹೆಣ್ಣು ತನ್ನ ತಲೆ ಏರಿತ್ತು (ಗಂಗೆ)*
*ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು(ಗಿರಿಜೆ)*
*ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನೇರಿತ್ತು(ಸರಸ್ವತಿ)*
*ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು(ಲಕ್ಷ್ಮಿ)*

*ಅದು ಕಾರಣ ಹೆಣ್ಣು ಹೆಣ್ಣಲ್ಲ ರಾಕ್ಷಸಿಯಲ್ಲ,*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡ'*

ಎಂದು ಹೆಣ್ಣು ಕೇವಲ ಮೋಹಕ ಭೋಗದ ವಸ್ತುವೆಂದು ಜನ ಕಾಣಕೂಡದೆಂದು ಈ ಸಂಸ್ಕೃತಿಯಲ್ಲಿ ಘಂಟಾ ಘೋಷವಾಗಿ ಹೇಳಿದೆ. ಆದರೆ ನಾವು ಇಂದು ಕಾಣುತ್ತಿರುವುದು ಶ್ರೀಮತಿ ಜಯಲಕ್ಷ್ಮಿಯಂಥ ಹಲವಾರು ಹತಾಶರಾದ ಮಹಿಳೆಯರು ಸಾವಿಗೆ ಮೊರೆ ಹೋಗುತ್ತಿರುವುದು. ಇಂಥ ಅರ್ಥ ಕಾಯದ ಮೋಹಗಳಿಗೆ ತುತ್ತಾದವರಿಗೆ ಬಸವಣ್ಣ ಹೇಳಿದಂತೆ ನಡೆದರೆ ಇಂಥ ಘಟನೆಗಳು ಆಗುವುದಿಲ್ಲ.

*ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರದೈವನೊಲ್ಲೆನೆಂಬ*

ದುರದೃಷ್ಟವಶಾತ್ ಇಂದು ಇಂಥ ಛಲವಿಲ್ಲದೆ ಪ್ರತಿಷ್ಠಿತರು ಎನಿಸಿಕೊಂಡವರು ಕೂಡ ಮರ್ಯಾದೆ ಕಳೆದುಕೊಳ್ಳುತ್ತಿದ್ದಾರೆ. ಬಸವಣ್ಣನವರು ತಮ್ಮ ವಚನದಲ್ಲಿ ಇಂಥವರಿಗೆ ಹೀಗೆ ಕೇಳುತ್ತಾರೆ.

*ಕಾಮವೇಕೋ ಲಿಂಗಪ್ರೇಮಿಯೆನಿಸುವಂಗೆ ?*
*ಕ್ರೋಧವೇಕೋ ಶರಣವೇದ್ಯನೆನಸುವಂಗೆ ?*
*ಲೋಭವೇಕೋ ಭಕ್ತಿಲಾಭವ ಬಯಸುವರಿಗೆ ?*
*ಮೋಹವೇಕೋ ಪ್ರಸಾದ ವೇದ್ಯ ನೆನಿಸುವಂಗೆ*
*ಮದ ಮತ್ಸರ ಉಳವಂಗೆ*
*ಹೃದಯಶುದ್ಧಿವಲ್ಲಿಯದೋ?*
*ಹದುಳಿಗಾರರಲಿಪ್ಪ ನಮ್ಮ ಕೂಡಲಸಂಗಮದೇವ*

ಶಿವಶರಣೆಯರಲ್ಲಿ ವಚನಶ್ರೇಷ್ಠಳಾದ ಅಕ್ಕಮಹಾದೇವಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಕಾಯ, ಕ್ರೋಧ, ಮೋಹ, ಲೋಭ, ಮದ, ಮತ್ಸರಗಳನ್ನು ಹಾವಿನ ಹಲ್ಲಿನಲ್ಲಿರುವ ವಿಷವೆಂದು ಇದನ್ನು ಕಿತ್ತೆಸೆದಾಗ ಹಾಯಾದ ಜೀವನ ನಡೆಸಬಹುದೆಂದು ತನ್ನ ವಚನದಲ್ಲಿ ಹೀಗೆ ಹೇಳುತ್ತಾಳೆ

*ಹಾವಿನ ಹಲ್ಲು ಕಳೆದು ಹಾವಾಡಿಸಲ್ಲಡೆ*
*ಹಾವಿನ ಸಂಗವೇ ಲೇಸು ಕಂಡಯ್ಯಾ*
*ಕಾಯದ ಸಂಗವ ವಿವರಿಸಬಲ್ಲಡೆ*
*ಕಾಯದ ಸಂಗವೇ ಲೇಸು ಕಂಡಯ್ಯ*
*ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು*
*ಚೆನ್ನಮಲ್ಲಿಕಾರ್ಜುನಯ್ಯ*
*ನೀನೊಲಿದವರು ಕಾಯಗೊಂಡಿದ್ದರೆನಬೇಡ*

ಹೀಗೆ ನಮ್ಮ ಮಾನಸಿಕ ಮತ್ತು ದೈಹಿಕ ದೌರ್ಬಲ್ಯಗಳನ್ನು ಕಿತ್ತೆಸೆಯದಿದ್ದರೆ ತಾಯಿ ರಕ್ಕಸಿಯಾದದ್ದನ್ನು ನಾವು ಇಂದು ಕಾಣುತ್ತಿದ್ದೇವೆ. ಇತ್ತೀಚೆಗಷ್ಟೆ ಕಾಯ ವಿಕಾರಕ್ಕೊಳಗಾದ 17 ವರ್ಷದ ಹುಡುಗಿ ಮಿನೆಸೋಟ ಅಮೇರಿಕದಲ್ಲಿ ಲಾಂಡ್ರಿಯಲ್ಲಿ ಮಗುವನ್ನು ಹೆತ್ತು ಅದಕ್ಕೆ 135 ಸಲ ಚುಚ್ಚಿ ಚುಚ್ಚಿ ಸಾಯಿಸಿದ್ದನ್ನು ಕೇಳಿರಬಹುದು. ಎಷ್ಟು ಜನ ತಾಯಂದಿರು ನವಜಾತ ಶಿಶುವನ್ನು ತಿಪ್ಪೆಗೆ, ಬಾವಿಗೆ ಎಸೆಯುತ್ತಿರುವುದನ್ನು ಕಂಡಿದ್ದೇವೆ. ಇಂಥ ವಿಪರೀತ ವಿಕಾರ ವಿಷಯಕ್ಕೆ ಶರಣ ಸಂಸ್ಕೃತಿಯ ಪಾಲನೆಯೇ ಮದ್ದು. ಸಮಾಜಕ್ಕೆ ಅಂಜಿ ಮುಚ್ಚಿ ಮಾಡುತ್ತಿರುವ ಹೀನ ಕೃತ್ಯಗಳು ಅನೇಕ ಮಹಿಳೆಯರ ಶೋಷಣೆ ಅಪಾರ. ಇಂಥ ವಿಷಮ ಸ್ಥಿತಿಯಲ್ಲಿ ಬದುಕುವುದು ಹೇಗೆಂದು ಜೀವನದ ಕಷ್ಟ ಸುಖ ಕಂಡು ಅನುಭವಿಯಾದ ಅಕ್ಕ ತನ್ನ ಇನ್ನೊಂದು ವಚನದಲ್ಲಿ ಹೀಗೆ ಹೇಳುತ್ತಾಳೆ

*ಬೆಟ್ಟದ ಮೇಲೊಂದು ಮನೆಯ ಮಾಡಿ*
*ಮೃಗಗಳಿಗೆ ಅಂಜಿದೊಡೆಯಂತಯ್ಯಾ*
*ಸಮುದ್ರದ ತಡಿಯಲ್ಲಿ ಮನೆಯ ಮಾಡಿ*
*ನೊರೆತೊರೆಗಳಿಗಂಜಿದಡೆಯಂತಯ್ಯಾ*
*ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕೆ*
*ನಾಚಿದೊಡೆಯೆಂತಯ್ಯಾ*
*ಚನ್ನಮಲ್ಲಿಕಾರ್ಜುನ ದೇವ ಕೇಳಯ್ಯ ಲೋಕದೊಳಗೆ*
*ಹುಟ್ಟಿರ್ದ ಬಳಿಕ ಸ್ತುತಿ ನಿಂದೆಗಳು ಬಂದಡೆ*
*ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.*

ಅಕ್ಕನ ಈ ಅತ್ಯುತ್ತಮವಾದ ಉಪದೇಶ ಪ್ರತಿಯೊಬ್ಬರಿಗೂ ಅನ್ವಯಿಸುತ್ತದೆ. ಇಂಥ ಸಂಸ್ಕೃತಿಯನ್ನು ಮೈಗೂಡಿಸಿದ್ದೇ ಆದರೆ ಶಿಕ್ಷಕ ಪ್ರೇಮಾಳಂತೆ ದಾರುಣ ಕಥೆಯ ಅಸಹಾಯಕ ನಾಯಕಿಯಾಗದೆ ಆತ್ಮಹತ್ಯೆ ಮಾಡಿಕೊಳ್ಳದೆ ಧೈರ್ಯ ಸ್ಥೈರ್ಯದಿಂದ ಬದುಕಬಹುದು. ನಾಡಲ್ಲಿರುವ ಜನರೇ ಇಂದು ಕಾಡು ಪ್ರಾಣಿಗಳಿಗಿಂತ ಕ್ರೂರಿಗಳಾಗಿದ್ದಾರೆ. ಅವರಿಗೆ ಅಂಜದೆ ಅಳುಕದೆ ಬದುಕುವುದು ಅನಿವಾರ್ಯವಾಗಿದೆ. ಇದಕ್ಕೆ ಶರಣ ಸಂಸ್ಕೃತಿಗಿಂತ ಮಿಗಿಲಾಗಿ ನಮ್ಮನ್ನು ಹದಗೊಳಿಸುವುದು ಇನ್ನೊಂದಿಲ್ಲ ಎನ್ನಬಹುದು.

ಜಗವು ಸುತ್ತಿಹುದು ನಿನ್ನಯ ಮಾಯೆ ಎಂದು ಶರಣರು ಅಂದರೆ ಜನರನ್ನು ಸುತ್ತಿದೆ ಜಾಗತೀಕರಣ.





ಇದರ ಪರಿಣಾಮವಾಗಿ ನಮ್ಮ ಊಟ ಉಪಚಾರದಲ್ಲೂ ವ್ಯತ್ಯಾಸ ಕಂಡು ಬರುತ್ತದೆ. ಇಚ್ಛಾಮರಣಿಯಾದ ನಮ್ಮ ಅಜ್ಜನ ತಮ್ಮ 95ನೇ ವರ್ಷ ಅಕ್ಷಯ ತೃತೀಯಕ್ಕೆ ಕಾಯ್ದು ಶಿವಪೂಜೆ ಮಾಡಿಕೊಂಡು ಲಿಂಗೈಕ್ಯ ನೈವೇದ್ಯ ತೋರಿಸಿ ಪ್ರಸಾದ ಸ್ವೀಕರಿಸಿ ಮನೆಯವರ ಊಟವಾಗಿದೆಯೆಂದು ಖಚಿತಪಡಿಸಿಕೊಂಡು ದೇವರ ಮುಂದೆ ಕೈಮುಗಿದು ಕುಳಿತು ಕೊಂಡು ಲಿಂಗೈಕ್ಯರಾದರು. ಅವರು ಸರಿಯಾದ ಸಮಯಕ್ಕೆ ಸಮತೋಲ ಆಹಾರವನ್ನು ಮಿತವಾಗಿ ಅದು ಲಿಂಗಕ್ಕೆ ನೈವೇದ್ಯ ತೋರಿಸಿ ಬಾಯಿಗೆ ತುತ್ತು ಹಾಕುತ್ತಿದ್ದರು. ಆದರೆ ಇಂದು ಜಾಗತೀಕರಣದ ಪರಿಣಾಮವಾಗಿ Fast food, Junk food ಎಂದು ಸಿಕ್ಕಸಿಕ್ಕಲ್ಲಿ, ಸಿಕ್ಕಾಪಟ್ಟೆ ಹೊತ್ತು ಗೊತ್ತಿಲ್ಲದೆ Kentaki chicken, Macdonald, Pizza hut, cake, ice cream, Chocalate ಎಂದು High calorie diet ನ್ನು ಸೇವಿಸುವುದರಿಂದ ನಮ್ಮ ಜನರಲ್ಲಿ ಸ್ಥೂಲಕಾಯವೆಂದರೆ obesity ದಿನೇ ದಿನೇ ಹೆಚ್ಚುತ್ತಿದೆ. ಯಾಂತ್ರೀಕರಣದ ಯುಗದಲ್ಲಿ ಯಾಂತ್ರಿಕ ಜೀವನ ನಡೆಸುವುದರ ಜೊತೆಗೆ ಮಿತಿ ಮೀರಿ ತಿನ್ನುವುದರಿಂದ ಇಂದು ಸ್ಥೂಲಕಾಯ ಒಂದು ವಾರಿಯಾಗಿ ಪರಿಣಮಿಸಿದೆ. ಇದರಿಂದ Diabetes, high B.P., Hyper cholestralemia ಅತೀ ಜಿಡ್ಡೂ ಮತ್ತು ಹೃದಯಾಘಾತ (Heart attack) ಈ ನಾಲ್ಕು ಚಾಂಡಾಳ ಜೇರಡಿಗಳಿಂದ ಮುಂದೆ 20–30 ವರ್ಷಗಳಲ್ಲಿ ನಮ್ಮ ಯುವಕರು ಅಕಾಲಿಕ ಮರಣ ಹೊಂದುವ ಸಂಖ್ಯೆ ಹೆಚ್ಚಾಗುವುದೆಂದು ತಿಳಿದು ಬಂದಿದೆ. ಹೀಗೆ ಸ್ಥೂಲಕಾಯದಿಂದ ಬರುವ Metabolic syndrome ನಿಂದ ತತ್ತರಿಸುವ ಮೊದಲು ನಾವು ಎಚ್ಚೆತ್ತಬೇಕಾದರೆ ಶರಣೆ ಅಕ್ಕಮಹಾದೇವಿ ಹೇಳಿದ್ದನ್ನು ಅರಿಯಲೇಬೇಕಾಗಿದೆ.

*ಆಹಾರವ ಕಿರಿದು ಮಾಡಿರಣ್ಣಾ, ಆಹಾರವ ಕಿರಿದು ಮಾಡಿ*

*ಆಹಾರದಿಂದ ವ್ಯಾಧಿ ಹಬ್ಬಿ ಬಲಿವುದಯ್ಯಾ*
*ಆಹಾರದಿಂ ನಿದ್ರೆ, ನಿದ್ರೆಯಿಂ ತಾಮಸ,*
*ಅಜ್ಞಾನ ಮೈಮರವು ಅಜ್ಞಾನದಿಂ ಕಾಯವಿಕಾರಹೆಚ್ಚಿ*
*ಕಾಯ ವಿಕಾರ, ಮನೋವಿಕಾರ, ಇಂದ್ರಿಯ ವಿಕಾರ*
*ಭಾವ ವಿಕಾರ, ವಾಯು ವಿಕಾರವನುಂಟು ಮಾಡಿ*
*ಸೃಷ್ಟಿಗೆ ತಹುದಾದ ಕಾರಣ ಕಾಯದ ಅತೀ ಪೋಷಣೆ ಬೇಡ*

*ಅತೀ ಪೋಷಣೆ ಮೃತ್ಯುವೆಂಬುದು*
*ಚೆನ್ನಮಲ್ಲಿಕಾರ್ಜುನನೊಲಿಸಬಂದ ಕಾಯ ಕೆಡಿಸದೆ ಉಳಿಸಿಕೊಳ್ಳಿರಯ್ಯ*

ದುರದೃಷ್ಟವಶಾತ್ ಎಲ್ಲಿ ನೋಡಿದರಲ್ಲಿ ಬಾರ್, ರೆಸ್ಟೋರೆಂಟ್ ಮತ್ತು ಮಾಂಸದ ಅಂಗಡಿಗಳು ತಲೆ ಎತ್ತಿವೆ. ಇವು ಮನುಷ್ಯರನ್ನಷ್ಟೇ ಅಲ್ಲ ನಾಯಿ ಮೊಸಳೆಗಳನ್ನು ಕೂಡ ಕ್ರೂರಿಗಳನ್ನಾಗಿ ಮಾಡುತ್ತವೆ. ಅವು ಮಕ್ಕಳನ್ನು ಜನನ್ನು ಕಚ್ಚುತ್ತವೆ.

ಹೀಗೆ ಮನೋವಿಕಾರ ಕಾಯವಿಕಾರದಿಂದ ನಾನಾ ರೋಗಗಳಿಗೆ ತುತ್ತಾಗಿ ಸಾಯುವವರಿಗೆ ಸಾವಿನಿಂದ ತಪ್ಪಿಸಲು ಹತ್ತು ಹಲವು ಅತ್ಯಾಧುನಿಕವಾದ ಫೈವ್ ಸ್ಟಾರ್ ಹೋಟೆಲ್‌ನಂತೆ ಕಾಣುವ ಆಸ್ಪತ್ರೆಗಳು ಬಂದಿವೆ. ಇಂಥ ಆಸ್ಪತ್ರೆಗಳಿರುವುದು ರೋಗಿಗಳಿಗೆ ಚಿಕಿತ್ಸೆ ಕೊಡುವುದಕ್ಕೆ ಶರಣಸಂಸ್ಕೃತಿಯನ್ನು ಅಳವಡಿಸಿಕೊಳ್ಳುವುದು ಅವಶ್ಯಕವಾಗಿದೆ. ಇಂಥ ಭ್ರಮೆಯಿಂದ ಜನ ಹೊರಗೆ ಬರಬೇಕು. ಲಕ್ಷಾಂತರ ರೂಪಾಯಿ ಖರ್ಚು ಮಾಡಿದರೂ ಆರೋಗ್ಯ ಮರಳಿ ಬರುವುದಿಲ್ಲ. ಶ್ರಮಜೀವಿಗಳಾಗಿ ಕಾಯಕ ಮಾಡಿದವರು ಕೈಲಾಸ ಕಟ್ಟಿದರೆ ಐಷಾರಾಮ ಜೀವನ ನಡೆಸಿ ಕಾಯಕ ಮಾಡದವರು ಕೈಲಾಸ ಸೇರುತ್ತಾರೆ ಎಂಬುದು ದಿಟ.

ನಾನಾ ತರಹದ ರೋಗಗಳು ಬಂದು ಶರೀರದ ವಿವಿಧ ಅವಯವಗಳು ನಿಷ್ಕ್ರಿಯಗೊಂಡಾಗ ನಾವು ವೈದ್ಯರು ಕೊನೆ ಘಳಿಗೆಯಲ್ಲಿ Kidney transplant, ventilator, supportive therapy ಕೊಡುತ್ತೇವೆ. ಕೊನೆಗೆ ಆ ಮನುಷ್ಯ ಸತ್ತಾಗ ಕೇವಲ ಮನೆಯವರುಗಳ ಕಣ್ಣೀರಿನ ಕಡಲಲ್ಲಿ ಅಷ್ಟೇ ಅಲ್ಲ ಸಾಲದ ಸಾಗರದಲ್ಲಿ ಮುಳುಗಿಸಿ ಹೋಗುತ್ತಾನೆ. 'ಡಾಕ್ಟ್ರೇ ಎಷ್ಟಾದರೂ ಖರ್ಚಾಗಲಿ ಏನಾದರೂ ಮಾಡಿ' ಎಂದು ಗೋಗರಿಯುವಾಗ ವೈದ್ಯರು ವ್ಯಥೆ ಪಡುತ್ತಿರುವ ರೋಗಿಯನ್ನು ಸಮಾಧಾನಗೊಳಿಸಲು psychotherapy, tranquilizer, sedation pain killer ಅಂತ ಏನೆ ಕೊಟ್ಟರು ಅದು ತಾತ್ಕಾಲಿಕ ಇಂಥ ರೋಗಿಗೆ ನೋವು ತಡೆದುಕೊಳ್ಳುವ ಶಕ್ತಿ ಬಂದು ಮನಸ್ಸು ಶಾಂತಿಗೊಳ್ಳಬೇಕಾದರೆ ವೈದ್ಯ ಸಂಗಣ್ಣ ಹೇಳಿದಂತೆ ಶಿವಪೂಜೆಯನ್ನೇ ಆಶ್ರಯಿಸಬೇಕಾಗುತ್ತದೆ.

*ನಾನಾರೋಗಂಗಳು ಬಂದು ದೇಹವ ಹಿಡಿದಲ್ಲಿ*
*ಶಿವಾರ್ಚನೆಯ ಬೆರಕೊಳ್ಳಿ, ಸಕಲಪುಷ್ಪಂಗಳಿಂದ*
*ಪೂಜೆಯ ಮಾಡಿಕೊಳ್ಳಿ ಪಂಚಾಕ್ಷರಿಪ್ರಣಮವ*

*ತಪ್ಪದೇ ತ್ರಿಸಂಧಿಯಲ್ಲಿ ನೆನಹುಗೊಳ್ಳಿ*
*ಇದರಿಂದ ರುಜೆ ದರ್ಪಂಗೆಡಗು*

ಅಂದರೆ ಆ ರೋಗದ ದರ್ಪ ಕಡಿಮೆಯಾಗುತ್ತದೆ ಎಂದು ವೈದ್ಯಸಂಗಣ್ಣ ಹೇಳುತ್ತಾರೆ ಅಷ್ಟೇ ಅಲ್ಲ ರೋಗ ಹೇಗೆ ಬರುತ್ತದೆ ಅದನ್ನು ತಡೆಗಟ್ಟುವುದು ಹೇಗೆ ಎಂದು ಈ ವಚನದಲ್ಲಿ ಹೀಗೆ ಹೇಳುತ್ತಾರೆ.

*ಜಿಹ್ವೇಂದ್ರಿಯ ಎಂಬ ರೋಗ ಬಾಯಲ್ಲಿ ಹುಟ್ಟಿ*
*ಗುಹ್ಯೇಂದ್ರಿಯವೆಂಬ ರೋಗ ಚಿತ್ತದಲ್ಲಿ ತತ್ತರಿಸುತ್ತದೆ ನೋಡ*
*ಆಸೆಯೆಂಬ ರೋಗ ಸರ್ವಾಂಗದಲ್ಲಿ ಹೊಕ್ಕು*
*ಸರ್ವರಿಗೆಲ್ಲಕ್ಕೂ ಪಾಖಂಡಿ ವೇಷಧಾರಿಗಳೆನಿಸುತ್ತದೆ ನೋಡಾ*
*ಈಗ ರೋಗ ನಿರೋಗವಾಗುವುದಕ್ಕೊಂದು ಮದ್ದುಂಟು*

ಅಂದರೆ ನಾವೇನು ಇಂದು prevention of disease ಅಥವಾ life style modification ಎನ್ನುತ್ತೇವೋ ಅದನ್ನು ಅವರು ಸವಿಸ್ತಾರವಾಗಿ ತಿಳಿಸಿದ್ದಾರೆ. ಅಷ್ಟೇ ಅಲ್ಲ ವಿದೇಶದಲ್ಲಿ ವಿದ್ಯಾರ್ಥಿಗಳು ಮತ್ತು ಇತರ ಯುವಕರಿಂದ ಆಗುತ್ತಿರುವ ಆತಂಕಕರ ಘಟನೆಗಳನ್ನು ಕಡಿಮೆ ಮಾಡಲು personality management ಅಂತ ಪ್ರಾರಂಭಿಸಿದ್ದಾರೆ. ಅದನ್ನು ನಮ್ಮ ಶರಣ ಶ್ರೇಷ್ಠ ಬಸವಣ್ಣನವರು ಸರಳ ಸುಂದರ ಕನ್ನಡದಲ್ಲಿ ಸ್ಪಷ್ಟವಾಗಿ

*ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ*
*ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ*
*ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ*

ಎಂದು ಏಳು ಸೂತ್ರಗಳಿಂದ ಧನಾತ್ಮಕ ಜೀವನದ ಬದಲು ಗುಣಾತ್ಮಕ ಬದುಕನ್ನು ಬಾಳುವಂತೆ ಮಾಡಿದರೆ ಇದಕ್ಕಿಂತ ಉತ್ತಮ personality management ಇನ್ನೊಂದಿಲ್ಲ ಎಂದು ಹೇಳಬಹುದು.

ಹೀಗೆ ನಮ್ಮಲ್ಲಿ ಜಾಗತೀಕರಣದಿಂದ ಆಸೆ, ಆಮಿಷದಿಂದ ಆರ್ಥಿಕ ಆಹಾರ ಮತ್ತು ಆರೋಗ್ಯದಲ್ಲಿ ಆದ ಬದಲಾವಣೆಯಿಂದ ಬಳಲುತ್ತಿರುವ ಜನರಿಗೆ ಶರಣ ಸಂಸ್ಕೃತಿ ಸಂಜೀವಿನಿಯಾಗಿದೆ. ಇದು ಸರ್ವಕಾಲಕ್ಕೂ ಸರ್ವರಿಗೂ ಲೇಸನ್ನೇ ಬಯಸುವ ಸಕಾರಾತ್ಮಕ ಸಂಸ್ಕೃತಿ ಇದರಲ್ಲಿ ಜಾತಿ, ಭೇದ, ಲಿಂಗ ಭೇದ, ಮೇಲು ಕೀಳೆಂಬ ಭೇದವಿಲ್ಲ. ಸರ್ವರಿಗೂ ಸದಾಚಾರ, ಸದ್ಭಾವನೆ, ಸನ್ನಡತೆಯ ಜೊತೆಗೆ ಪಥ್ಯ, ಶುದ್ಧ ಕಾಯಕ ಮತ್ತು ದಾಸನಾಗಿ ಸಮಾಜ ಸೇವೆ ಮಾಡುವ ದಾಸೋಹ ಇಂದು ಅತೀ ಅವಶ್ಯವಾಗಿದೆ. ಗಾಂಧೀಜಿಯವರು ಕಂಡ ರಾಮ ರಾಜ್ಯ, ನನಗಾಗಿ ನೀನು, ನಿನಗಾಗಿ ನಾನು, ಎಲ್ಲರೂ ಎಲ್ಲರಿಗಾಗಿ ಎಂಬ ಸಹಕಾರಿ ಆಂದೋಲನದ ಜೊತೆಗೆ 'ದಯವೇ ಧರ್ಮದ ಮೂಲವಯ್ಯಾ' ಎನ್ನುವ ಶರಣ ಸಂಸ್ಕೃತಿ ಅನಿಷ್ಟ ಜಾತೀಯತೆಯ ಜೊತೆಗೆ ಜಾಗತೀಕರಣದಿಂದ ಉದ್ಭವಿಸಿದ ಸರ್ವ ಸವಾಲಕ್ಕೂ, ವ್ಯಾಧಿಗಳಿಗೆ ದಿವ ಔಷಧಿಯಾಗಿದೆ.

*

## ವಚನಗಳು

ಹುಟ್ಟಲೇಕೋ ನರರ ಜನ್ಮದಲ್ಲಿ? ಕಟ್ಟಲೇಕೋ
ಕೊರಳಲ್ಲಿ ಲಿಂಗವ? ಕಟ್ಟಿಯೂ ಕಾಣದೆ,
ತೊಟ್ಟನೆ ತೊಳಲಿ, ಅರಸಲೇಕೋ ಧರೆಯ
ಮೇಲೆ? ಅರಸಿಯೂ ಕಾಣದೆ ಸತ್ತು ಮೆಟ್ಟಿ
ಮೆಟ್ಟಿ ಹೂಳಿಸಿಕೊಳಲೇಕೋ? ಇದನರಿದರಿದು,
ಹುಟ್ಟು ಹೊಂದಳಿದ ಶರಣರ ನಿತ್ಯ ನಿತ್ಯ
ನೆನೆದು ಬದುಕಿದೆ ಬಸವಪ್ರಿಯ
ಕೂಡಲಚೆನ್ನ ಬಸವಣ್ಣಾ.

* * *

ತನ್ನ ಮನೆಯನರಿಯದೆ ತವರ ಮನೆಗೆ
ಹಾರುವ ಹೆಣ್ಣಿನಂತೆ, ಭಿನ್ನವಿಟ್ಟು
ನೋಡಿಹೆನೆಂದು ನಿಮ್ಮನರಿಯದೆ ಕೆಟ್ಟಿತು
ಜಗವೆಲ್ಲ. ಅದಂತಿರಲಿ, ಇನ್ನು ತನ್ನ
ತಾನರಿದವಂಗೆ ತನುವೇ ಲಿಂಗ, ಮನವೇ
ಪುಷ್ಪ. ಈ ಅನುವನರಿದು, ಘನವ ನೆಮ್ಮಿದ
ಶರಣರ ಎನಗೊಮ್ಮೆ ತೋರಯ್ಯ, ನಿಮ್ಮ
ಧರ್ಮ ಬಸವಪ್ರಿಯ ಕೂಡಲಚೆನ್ನಬಸವಣ್ಣಾ.

–ಹಡಪದ ಅಪ್ಪಣ್ಣ





# ಪ್ರಾಕೃತಿಕ ಉಪಚಾರದಲ್ಲಿ ಪವನ

–ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೪, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.

– ಮುಂದುವರೆದ ಭಾಗ

*ನಿಸರ್ಗೋಪಚಾರದಂತೆ ಕೂಡಿಟ್ಟ ಕೊಳೆಯೇ*
*ಕಾಯಿಲೆಗೆ ಕಾರಣ.*
*ಅದನು ಹೊರದುಡುವಿಕೆಗೆ ಚಿಕಿತ್ಸೆ ಎಂಬ ವಿಶದೀಕರಣ*
*ವಾಯುವಿನ ಮತ್ತೊಂದು ಹೆಸರೇ ಪವನ*
*'ಪೂ' ಧಾತುವಿನ ಅರ್ಥವೇ ಶುದ್ಧೀಕರಣ*
*ರೋಗ ಕಳೇಯಲು ಬೇಕಾದುದೇ ಕೊಳೆಯ ನಿವಾರಣೆ*
*ವಾಯು ಮಾಡುತಿಹುದು ಅದೇ ಕೆಲಸವನೇ*
*ವಿಜ್ಞಾನ ಹೇಳುತಿಹುದೂ ಅದೇ ಸತ್ಯದ ನೆಲೆ*
*ಯಾವಾಗಲೂ ಒಂದೇ ಮಾರ್ಗಗಳಿರಬಹುದು ಹಲವು*
*ಕೊನೆಯ ನಿಲ್ದಾಣ ಮಾತ್ರ ಒಂದೇ ನಿಲುವು*

'ನಾವು ಆರೋಗ್ಯವಾಗಿದ್ದಾಗ ಒಂದು ವೇಳೆ ಒಳ್ಳೆಯ ಗಾಳಿ ಸಿಕ್ಕಿದರೆ ಉಪಯೋಗಿಸುತ್ತೇವೆ, ಅದಕ್ಕೆ ಅಡ್ಡಿಯಿಲ್ಲ. ಆದರೆ ನಮಗೆ ಕಾಯಿಲೆ ಬಂದಾಗ ಬಿಲ್‌ಕುಲ್ ಗಾಳಿಯನ್ನು ಮನೆಯ ಒಳಗೆ ಬಿಡುವುದಿಲ್ಲ. ಬೇಕಾದರೆ ರೋಗಿಯನ್ನು ಮಲಗಿಸಿರುವ ಕೋಣೆಯನ್ನು ನೋಡಿ, ಎಲ್ಲಾ ಬಾಗಿಲುಗಳೂ ಮುಚ್ಚಲ್ಪಟ್ಟಿರುತ್ತವೆ. ಕಾರಣ– ತಂಗಾಳಿ ಶೀತ. ಅಶುದ್ಧ ಗಾಳಿಗಿಂತ ಶೀತವೇ ವಾಸಿ. ಮಹಾತ್ಮಾ ಗಾಂಧೀಜಿಯವರು ತಮ್ಮ ಮಗನಿಗೆ ಜ್ವರ ಬಂದಾಗ ಕಿಟಕಿಗಳನ್ನೆಲ್ಲಾ ತೆಗೆದು ಉಪಚರಿಸಿದುದನ್ನು ತಮ್ಮ ಆತ್ಮಚರಿತ್ರೆಯಲ್ಲಿ ಬರೆದಿದ್ದಾರೆ. ಅಲ್ಲದೆ ಜ್ವರ ಬಂದಾಗ ಆಗಾಗ ಬಟ್ಟೆಯನ್ನೆಲ್ಲಾ ತೆಗೆದು ಶರೀರವನ್ನು ಗಾಳಿಯ ಸಂಪರ್ಕಕ್ಕೆ ಬಿಡಬೇಕೆಂದೂ ಸಹ ತಿಳಿಸುವುದನ್ನು ಅವರು ಮರೆತಿಲ್ಲ. ರೋಗಿಗಳು ಬಟ್ಟೆಯನ್ನೇ ಹಾಕಬಾರದೆಂದಲ್ಲ. ಬೆಚ್ಚನೆಯ ಬಟ್ಟೆ ಹಾಕಬೇಕು. ಆದರೆ ಆಗಾಗ ಮೈ ಗಾಳಿಗೆ ಒಡ್ಡಬೇಕು.

**ಚರ್ಮದ ಉಸಿರಾಟ :** ಮೂಗು ಉಸಿರಾಟದ ಅಂಗ ಎನ್ನುವುದು ಮಗುವಿಗೂ ಗೊತ್ತು. ಆದರೆ, ನಾವು ಚರ್ಮದ ಮೂಲಕವೂ ಉಸಿರಾಡುತ್ತಿರುತ್ತೇವೆ ಎನ್ನುವ ವಿಷಯ ಬಹಳ ಮಂದಿಗೆ ಗೊತ್ತಿಲ್ಲ, ಅಥವಾ ಗೊತ್ತಿದ್ದರೂ ಆಲಕ್ಷ್ಯದಿಂದ ಇದ್ದೇವೆಯೇ?

*ಮೊದಲು ಮಾನ ಮುಚ್ಚಲಷ್ಟೇ ಬಂದಿತು ಕೌಪೀನ*
*ಈಗ ಬಟ್ಟೆಯ ವ್ಯವಹಾರ ಸೊಬಗಿನ ಸೋಪಾನ*
*ಚರ್ಮಕೆ ಏಕೆ ಬೇಕು ಏಳು ಸುತ್ತಿನ ಕೋಟೆ*
*ಅದರಿಂದ ಆಯಿತು ಈ ಶರೀರ ರೋಗದಾ ಮೂಟೆ*
*ಫ್ಯಾಷನ್ನಿನ ಹೆಸರಿನಲಿ ಯಾವುದಾದರೂ ಆಗುವುದು ಬಟ್ಟೆ*
*ಕೃತಕ ಬಟ್ಟೆಗಳಿಂದ ಚರ್ಮಕೆ ಉಸಿರು ಕಟ್ಟಿಸಿ ತೊಂದರೆ*
*ಕೊಟ್ಟೆ ಅದರ ಫಲ ಅನೇಕ ಚರ್ಮರೋಗಗಳು*
*ಜತೆಗೆ ಅದರಿಂದ ಹಾರ್ಟ್ ಅಟ್ಯಾಕ್ ಎಂದು ಹೇಳುತಿದೆ*
*ವಿಜ್ಞಾನ ಸಂಶೋಧನೆಗಳು*
*ಗಾಂಧೀಜಿ ಚಿಂತಿಸಿ ಚಿಂತಿಸಿ ತಂದಿದ್ದರು ಆ ಖಾದಿಬಟ್ಟೆ*
*ರಾಜಕಾರಣಿಗಳು ಮಾಡಿಹರು ಅದರ ಮಾನವನು*
*ಮೂರಾಬಟ್ಟೆ ಹತ್ತಿಯಾ ಬಟ್ಟೆಯೊಂದೇ ಆರೋಗ್ಯಕಿರುವ*
*ಬಟ್ಟೆ(ಮಾರ್ಗ) ಖಾದಿ ಉಟ್ಟರೆ ತುಂಬುವುದು ಕಾರ್ಮಿಕರ*
*ಹೊಟ್ಟೆ ಮಿಲ್ ಬಟ್ಟೆಯಿಂದ ಅವರ ಹೊಟ್ಟೆಗೆ ಬರೀ ತಣ್ಣೀರು ಬಟ್ಟೆ*

**ನ್ಯಾಚುರುಸಂನವರ ಅಭಿಪ್ರಾಯ :** ಮನುಜ ಎಂದು ಬಟ್ಟೆಯನ್ನು ಹಾಕಲು ಪ್ರಾರಂಭಿಸಿದನೋ ಅಂದಿನಿಂದ ಪ್ರಾರಂಭವಾಯ್ತು ಅವನ ಅನಾರೋಗ್ಯದ ಜೀವನ. ಆದ್ದರಿಂದ ನಾವು ಮತ್ತೆ ಆಡಂ ಮತ್ತು ಈವ್‌ರ ಕಾಲಕ್ಕೆ ಹಿಂದಿರುಗೋಣವೆಂದು ಹೊರಟರು ಈ ಜನ. ಬೆತ್ತಲೆಯಾಗಿ ಕಾಡಿನಲ್ಲಿ ವಾಸಿಸಬೇಕೆಂದು ಅವರ ಅಂಬೋಣ. ಇದು ಒಂದು ತುದಿಯಾದರೆ ನಾಗರೀಕತೆ ಎಂದು ಇಂದು ನಾವು ಹೇಳಿಕೊಂಡು, ನೈಸರ್ಗಿಕ ವಸ್ತುಗಳಿಂದ ದೂರವಾಗಿ ಬದುಕಲು ಪ್ರಯತ್ನಿಸುತ್ತಿರುವುದು ಮತ್ತೊಂದು ತುದಿ. ಇಂದಿನ ಚಿಂತನೆ ಇವೆರಡರ ಮಧ್ಯದಲ್ಲಿರಬೇಕು. ಮಧ್ಯಮ ವರ್ಗ ಶ್ರೇಷ್ಠಮಾರ್ಗ. ಬಟ್ಟೆ ಎನ್ನುವುದು ಮಾನ ಮುಚ್ಚಲೇ ವಿನಃ ಅದೊಂದು ಪ್ರದರ್ಶನದ ವಸ್ತುವಲ್ಲ. ಅದು ಸರಳವಾಗಿದ್ದಷ್ಟೂ ಉತ್ತಮ. ಅದು ಹತ್ತಿಯಿಂದ ತಯಾರಿಸುದುದೇ ಆಗಿರಬೇಕು. ಆಹಾರದ ವಿಷಯದಲ್ಲಿ ಹಿಂಸೆ–ಅಹಿಂಸೆಯ ಬಗ್ಗೆ ಮಾತನಾಡುವ ನಾವು ಬಟ್ಟೆಯ ವಿಷಯ ಬಂದಾಗ ಬಾಯಿ ಬಿಗಿದುಕೊಂಡಿರುವುದು ಏಕೆ? 'ಮಡಿ'ಗೆ ಬರುವ ರೇಷ್ಮೆ ಅಹಿಂಸೆಯಿಂದ ಕೂಡಿದುದೇ ಅಲ್ಲವೇ? ಒಂದು ರೇಷ್ಮೆ ಸೀರೆಯಾಗಲು ಎಷ್ಟು ಹುಳಗಳು ತಮ್ಮ ಪ್ರಾಣಾರ್ಪಣೆ ಮಾಡಬೇಕು?

*ಸುಂದರಿ! ನೀ ರೇಷ್ಮೆ ಸೀರೆ ಉಟ್ಟು ಬೀಗಲು ಎಷ್ಟು*
*ಹುಳುಗಳಿಗೆ ತೆರೆಯಬೇಕು ಸ್ವರ್ಗದಾ ಬಾಗಿಲು ಬೇಸಿಗೆಯಲಿ*
*ಮದುವೆಯ ಮನೆಯಲಿ ನೀ ಸುರಿಯುತಿಹ ಬೆವರು*

*ನೀನುಟ್ಟ ರೇಷ್ಮೆ ಸೀರೆಗಾಗಿ ಸತ್ತ ಹುಳುಗಳದೇ ಕಣ್ಣೀರು*
*ಅವುಗಳಿಗಾಗಿ ನೀ ಮರುಗು ಮಾತೃ ಸ್ವರೂಪಿಣಿ*
*ನಿನಗೆ ಮತ್ಯಾರು ಸಾಟಿ, ಬಿಟ್ಟು ಧರಣಿ*
*ಕರುಣೆ ನೀಡುವುದು ನಿನಗೆ ಸಹಜ ಸೌಂದರ್ಯ*
*ನಿಲ್ಲಿಸು ರೇಷ್ಮೆ ಹುಳುಗಳ ಮಾರಣ ಹೋಮದ ಕಾರ್ಯ*
*ವಾಯುತತ್ವದ ಬಗ್ಗೆ ಹೇಳ ಹೊರಟು ಬಟ್ಟೆಯ ಮೇಲೇಕೆ*
*ಇಷ್ಟೊಂದು ಕೊರೆತ?*
*ಚಿಂತನೆಯನು ಬಿಟ್ಟಾಗ ಬೇಕೇ ಬೇಕು ಎಚ್ಚರಿಕೆಯ*
*ಮೊರೆತ ಇಲ್ಲದಿರೆ ತರುವುದದು ಅನೇಕ ದುರಂತ*

**ವಾಯುಸ್ನಾನ :** ಸೂರ್ಯಸ್ನಾನದಂತೆಯೇ ಗಾಳಿಯಲ್ಲಿ ಕಡಿಮೆ ಬಟ್ಟೆಯನ್ನು ಹಾಕಿಕೊಂಡು ಕೊಂಚಕಾಲ ಇರುವುದೇ ವಾಯುಸ್ನಾನ. ಬೆಳಗಿನ ವಾಯುಸಂಚಾರವೂ ವಾಯು ಸ್ನಾನವೇ. ಅತಿ ಹೆಚ್ಚು ಬಟ್ಟೆಯಿಂದ ಮೈಯನ್ನು ಮುಚ್ಚಿಕೊಂಡು ನಡೆಯುವುದು ಸರಿಯಲ್ಲ. ಚಳಿಗಾಲದಲ್ಲಿಯೂ ಸಹ ಸಾಧ್ಯವಾದಷ್ಟು ಕಡಿಮೆ ಬಟ್ಟೆಯನ್ನು ಧರಿಸಿ ನಡೆಯಬೇಕು. ಆದರೆ ರೋಗಿಗಳು, ವೃದ್ಧರು ಬೆಚ್ಚನೆಯ ಉಲ್ಲನ್ ಬಟ್ಟೆಯನ್ನು ಧರಿಸಿ ವಾಕಿಂಗ್ ಮಾಡಬಹುದು. ಈಗ ಒಳ್ಳೆಯ ಗಾಳಿಯು ಬೇಕಿದ್ದಲ್ಲಿ 'ಮಾರ್ನಿಂಗ್ ವಾಕ್' ಮಾಡಲೇಬೇಕು. ಇಂದಿನ ದಿನಗಳಲ್ಲಿ ಎಲ್ಲಕ್ಕಿಂತ ತುಟ್ಟಿಯಾದದ್ದು ಶುದ್ಧ ಗಾಳಿಯೇ! ತಲೆಯ ನೋವು ಬಂದಾಗ ತಂಪಾದ ಗಾಳಿಯಲ್ಲಿ ಅಡ್ಡಾಡುವ ಬದಲು ಯಾವುದೇ ನೋವು ನಿವಾರಕವನ್ನು ನುಂಗಿ ಟಿ.ವಿ.ಯ ಮುಂದೆ ಕುಳಿತುಬಿಡುತ್ತಿದ್ದೇವೆ. ಇದು ತಪ್ಪು, ಸೊಳ್ಳೆಗಳಿಗೆ, ಕಳ್ಳರಿಗೆ ಹೆದರಿ ಕಿಟಕಿಗಳನ್ನು ಮುಚ್ಚಿ ಮಲಗುವುದು ಸರಿಯಲ್ಲ. ವಾಯುವನ್ನು ಸರಿಯಾಗಿ ಬಳಸಿಕೊಳ್ಳದಿದ್ದರೆ ಕಾಯಿಲೆಗೆ ಗುರಿಯಾಗಲೇ ಬೇಕಾಗುತ್ತದೆ. ಇಂದು ಪಟ್ಟಣಗಳಲ್ಲಿ ಮನೆಗೊಬ್ಬರಂತೆ ಅಸ್ತಮಾ ರೋಗಿ ಇದ್ದಾರೆ. ಕಲುಷಿತ ಗಾಳಿಯ ಜೊತೆಗೆ ನಮ್ಮ ಶ್ವಾಸಕೋಶದ ಅಶಕ್ತತೆಯೂ ಸೇರಿದೆ. ನಗರದ ವಾಯುವನ್ನು ಶುದ್ಧವಾಗಿಡುವಲ್ಲಿ ನಾಗರೀಕರೆಲ್ಲರೂ ಪ್ರಯತ್ನಿಸ ಬೇಕು. ಜೊತೆಯಲ್ಲಿಯೇ ಶರೀರ ವಾಯುವನ್ನು ಹೀರುವ ಶಕ್ತಿಯನ್ನು ಹೆಚ್ಚಿಸಬೇಕು. ಹೇಗೆ ಹೆಚ್ಚಿಸುವುದು? ವ್ಯಾಯಾಮದಿಂದ. ವಾಯುವಿನ ಬಗ್ಗೆ ಹೆಚ್ಚು ಬರೆಯು ವುದಕ್ಕಿಂತ, ಭಾಷಣ ಕೊರೆಯುವುದಕ್ಕಿಂತ ಒಂದು ಮರವನ್ನು ಬೆಳೆಸಿದರೆ ಹೆಚ್ಚು ಅರ್ಥಪೂರ್ಣ. ಈಚೆಗೆ ನಗರಗಳಲ್ಲಿ ಮರಗಳಿಂದ ದೂರವಾಗುವ ಒಂದು ಸಂಸ್ಕೃತಿ ಬೆಳೆಯುತ್ತಿದೆ. ಇದು ಬಹಳ ದೊಡ್ಡ ದುರಂತ.

*ನಮ್ಮ ರೋಗದಲಿ ನಿರೋಗದಲಿ ಬಹಳ ಮುಖ್ಯವಾದುದು*
*ಈ ವಾಯು ಇದನರಿಯದೇ ಧಿಕ್ಕರಿಸಿ ನಡೆದರೆ*
*ಕಡಿಮೆಯಾಗುವುದು ನಮ್ಮ ಆಯು*

*–ಮುಂದುವರೆಯುತ್ತದೆ*

## ಚಿಂತೆ

ಇಂದು ಪ್ರಪಂಚದೆಡೆಯೆಲ್ಲೆಲ್ಲಾ ಅಶಾಂತಿ ತಾಂಡವ ವಾಡುತ್ತಿದೆ. ಮಾನವನ ಮನದಲ್ಲಿ ನಡೆಯುವ ತರಂಗ ಗಳ ತಿಕ್ಕಾಟದ ಪ್ರತಿರೂಪವೇ ಅಶಾಂತಿ. ಇದು ಸಮಯ, ಸಂದರ್ಭ, ಸಂಬಂಧ ಮತ್ತು ವ್ಯಕ್ತಿಯ ಎಣಿಕೆ ಇಲ್ಲದೇ ನಾನಾ ರೂಪಗಳಲ್ಲಿ ಉದ್ಭವಗೊಂಡು 'ಮಾನಸಿಕ ಯುದ್ಧ'ವಾಗಿ ಮಾರ್ಪಡುತ್ತದೆ. 'ಮಾನಸಿಕ ಯುದ್ಧ'ಕ್ಕೆ ಸಂಬಂಧಿಸಿದಂತೆ ಒಮ್ಮೆ ಬಂದ ವಿಚಾರವೇ ಪುನಃ ಪುನಃ ಮನಸ್ಸಿನ ಮೇಲೆ ದಾಳಿ ಮಾಡಿ ಮನುಷ್ಯನನ್ನು 'ನಿರುತ್ಸಾಹಿ'ಯನ್ನಾಗಿ ಮಾಡುವ ಅನಿಷ್ಟ ವಸ್ತುವೇ 'ಚಿಂತೆ'.

ಇದು ಕಾಮ, ಕ್ರೋಧ, ಲೋಭ, ಮೋಹ ಅಹಂಕಾರ ಗಳಿಂದ ಜನ್ಮ ಪಡೆಯುತ್ತದೆ.

ಚಿಂತೆ! ಚಿಂತೆ ಎಂದರೆ ಮನಸ್ಸಿನ ಒಂದು ಸೂಕ್ಷ್ಮ ದೃಷ್ಟಿಕೋನ. ಇದು ಕೆಲವಾರು ವ್ಯಕ್ತಿಗಳಲ್ಲಿ ನಾನಾ ತೆರನಾಗಿ ಛಿದ್ರಗೊಳ್ಳುತ್ತದೆ. ವಿದ್ಯಾರ್ಥಿಗೆ ಪರೀಕ್ಷೆಯ ಚಿಂತೆಯಾದರೆ, ಬೆಳೆದ ಮಗಳಿಗೆ ಯೋಗ್ಯ ವರನನ್ನು ಹುಡುಕುವ ಚಿಂತೆ ತಂದೆ–ತಾಯಿಗಳಿಗೆ. ಪ್ರೇಮಿಗಳಿಬ್ಬರು ಪ್ರೀತಿಯಿಂದ ವಂಚಿತ ರಾದಾಗ ಅಥವಾ ಅಕ್ಕ, ತಮ್ಮನ, ಪ್ರೀತಿ ವಿಫಲಗೊಂಡಾಗ ಅದನ್ನು ಮರಳಿ ಪಡೆಯುವ ಚಿಂತೆ. ಬಡವನಿಗೆ ಹೊಟ್ಟೆಗೆ ರೊಟ್ಟಿಯ ಚಿಂತೆಯಾದರೆ, 'ಧನಿಕ'ನಿಗೆ ಇರುವ ಹಣವನ್ನು ಎಲ್ಲಿ ತೊಡಗಿಸಲು ಎಂಬ ಚಿಂತೆ. ಹೀಗೆ ಚಿಂತೆ ಎಲ್ಲಾ ರೀತಿಯಲ್ಲೀ ಸರ್ವ ವ್ಯಾಪಿಯಾಗಿರುವುದರಿಂದ ನಮ್ಮ ಜೀವನವೇ 'ಚಿಂತಾಮಯ'ದಲ್ಲಿ ಮುಳುಗಿದೆ ಎಂದರ್ಥ. ವ್ಯಕ್ತಿಯ ಜೀವನದಲ್ಲಿ ಅಶುಭ, ಅಹಿತಕರ ಪ್ರಸಂಗಗಳಿಂದ ಪ್ರತಿಕೂಲಗಳುಂಟುದಾಗ 'ಚಿಂತೆ' ಉದ್ಭವಿಸುತ್ತದೆ. ಭವಿಷ್ಯದ ಕುರಿತಾದ ಅಲ್ಪ–ಸ್ವಲ್ಪ ನಿರಾಶೆ ಅಥವಾ ಸಂಶಯವೇ ಚಿಂತೆಗೆ ಕಾರಣವೆನ್ನಬಹುದು. 'ಚಿಂತೆ'ಯು ಹೆಚ್ಚಾಗಿ ನಿರಾಶಾವಾದಿ ಗಳನ್ನೇ ಹಿಂಬಾಲಿಸುತ್ತಿರುತ್ತದೆ. ಧನಿಕನಿಗೆ ಕೊಟ್ಟ ಸಾಲ ಮರುಪಾವತಿ ಸುವನೋ, ಇಲ್ಲವೋ ಎಂಬ ಸಂಶಯಕ್ಕನು ಗುಣವಾಗಿ ಸಾಲ ಒಯ್ದ ವ್ಯಕ್ತಿಯ ಮೇಲೂ ಪ್ರಭಾವ ಬೀರುತ್ತದೆ. ಹೀಗೆ 'ಚಿಂತೆ'ಯಿಂದುಂಟಾಗುವ ಸೂಕ್ಷ್ಮ ತರಂಗಗಳು ವಾತಾವರಣ ಹಾಗೂ ತನ್ನ ಮೇಲೆ ತಾನೇ ಶಂಕಿಸುತ್ತಿರುವ ಆ ವ್ಯಕ್ತಿಯ ಮನಸ್ಸನ್ನು ಕೆಡಿಸುತ್ತದೆ.

ಮನುಷ್ಯನ ಚಂಚಲನಾತ್ಮಕ ಬದಲಾವಣೆಯಿಂದಾಗಿ ಅವನ ಕರ್ಮಫಲವು ಅಷ್ಟೇ ಛಿದ್ರಗೊಂಡಿರುತ್ತದೆ. ಆದ ಪ್ರಯುಕ್ತ ಅಶುಭ, ಅಹಿತಕರ ಚಿಂತೆಗಳನ್ನು ಮಾಡದೇ ತನ್ನ ಹಾಗೂ ಅನ್ಯರ ಶುಭ ಚಿಂತಕನಾಗಿಯೇ ಉಳಿದರೆ ಇದು ಜೀವಂತವಾಗಿ 'ಚಿಂತೆ' ಎಂಬ ಅನಿಷ್ಟತೆಯಿಂದ ದಹಿಸಲ್ಪಡುತ್ತಿರುವ ಜನಾಂಗವು ಬದುಕಲು ಸಾಧ್ಯ ಎನ್ನಬಹುದೇ?

–ಬ್ಯಾಡನೂರು ವೀರಭದ್ರಪ್ಪ ಎಸ್.
ಪಾವಗಡ





## ಶ್ರೀ ಸಿದ್ಧಗಂಗಾ ಮಠದ ಶಾಶ್ವತ ದಾಸೋಹ ನಿಧಿಗೆ ಉದಾರವಾಗಿ ಕಾಣಿಕೆ ನೀಡಿದ ಮಹನೀಯರುಗಳು

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 4430. | ಶ್ರೀ ಆರ್. ಗಾಯತ್ರಿದೇವಿ<br>ಕೆ.ಆರ್. ರಸ್ತೆ, ಜಯನಗರ, ಬೆಂಗಳೂರು. | 5,001.00 |
| 4431. | ಶ್ರೀಮತಿ ಭ್ರಮರಾಂಭ ಮತ್ತು ಚಂದ್ರಶೇಖರಯ್ಯ<br>ಎಸ್.ಐ.ಟಿ. 1ನೇ ಕ್ರಾಸ್, ತುಮಕೂರು. | 2,001.00 |
| 4432. | ಶ್ರೀಮತಿ ಎಸ್. ಗಂಗಮ್ಮ ಮತ್ತು ಕೆ.ಪಿ. ರಾಜಣ್ಣ<br>ನಿವೃತ್ತ ಪ್ರಾಂಶುಪಾಲರು, ಕೊರಟಗೆರೆ. | 5,005.00 |
| 4433. | ಶ್ರೀ ಬಿ. ರಾಜು<br>ಎಂ.ಜಿ. ರಸ್ತೆ, 1ನೇ ಕ್ರಾಸ್, ತುಮಕೂರು. | 1,000.00 |
| 4434. | ಡಾ॥ ವಿ.ಎನ್. ಪುಟ್ಟಣ್ಣ<br>ನಂ.6–008, ಬೆಂಗಳೂರು. | 1,000.00 |
| 4435. | ಶ್ರೀ ಬಿ.ಎಸ್. ಕೃಪಾಶಂಕರ್<br>ಜಯನಗರ, 11ನೇ ಮೈನ್, ಬೆಂಗಳೂರು. | 3,001.00 |
| 4436. | ಶ್ರೀ ಅಪ್ಪಾಜಪ್ಪ ಮತ್ತು ಕುಟುಂಬವರ್ಗ<br>ಅಟ್ಟೂರು, ದಾಸರಹಳ್ಳಿ ಅಂಚೆ, ಬೆಂ.ಗ್ರಾ.ಜಿಲ್ಲೆ. | 2,011.00 |
| 4437. | ಎಸ್.ಆರ್. ಚಂದ್ರಶೇಖರಯ್ಯ, ಡೆವಲಪ್‌ಮೆಂಟ್ ಆಫೀಸರ್<br>ಎಲ್.ಐ.ಸಿ., ಕುಣಿಗಲ್, ತುಮಕೂರು ಜಿಲ್ಲೆ. | 10,000.00 |
| 4438. | ಶ್ರೀ ಎಂ. ಪುಟ್ಟಮಾದಪ್ಪ ಮೈರದ, ರಿಸೋರ್ಸ್ ಸೆಂಟರ್<br>ಮ್ಯಾನೇಜರ್, ಕಾಮಸಮುದ್ರಮ್,<br>ಬಂಗಾರಪೇಟೆ ತಾ., ಕೋಲಾರ ಜಿಲ್ಲೆ. | 30,000.00 |
| 4439. | ಶ್ರೀ ಶಿವರುದ್ರಯ್ಯ ಬಿನ್ ವೀರಣ್ಣ<br>ರಂಗೇನಹಳ್ಳಿ, ಸೋಲೂರು ಹೊ. ಬೆಂ.ಗ್ರಾ.ಜಿ. | 3,000.00 |
| 4440. | ಶ್ರೀ ಡಿ. ಬೋರೇಗೌಡ, ನಿ.ತಹಶೀಲ್ದಾರ್<br>ಗಾಂಧಿನಗರ, ಮಂಡ್ಯ ಪಟ್ಟಣ, ಮಂಡ್ಯ. | 5,000.00 |
| 4441. | ಶ್ರೀ ಡಿ.ಎಸ್. ರಾಜೇಂದ್ರಪ್ರಸಾದ್, ಹಿರಿಯ ಶ್ರೇಣಿ<br>ಉಪನ್ಯಾಸಕರು, ಎಸ್.ಐ.ಟಿ. ತುಮಕೂರು. | 8,500.00 |
| 4442. | ಶ್ರೀ ಚೌಡಮ್ಮ ಮತ್ತು ಶ್ರೀ ಬೈರಪ್ಪ<br>ರಾಜಾಜಿನಗರ, 3ನೇ ಬ್ಲಾಕ್, ಬೆಂಗಳೂರು. | 1,001.00 |
| 4443. | ಶ್ರೀಮತಿ ಮಮತ ಲೋಕೇಶ್<br>ಶಿವಗಂಗಾನಗರ, ಬಟವಾಡಿ, ತುಮಕೂರು. | 1,001.00 |
| 4444. | ಶ್ರೀ ಬಿ.ವಿ. ಬಸವರಾಜ<br>ಜಯಲಕ್ಷ್ಮಿ ಪುರಂ, ಮೈಸೂರು. | 4,010.00 |
| 4445. | ಶ್ರೀ ಎಸ್. ಶಶಿಧರ್ ಕೇರಾಫ್ ಬಿ.ವಿ. ಬಸವರಾಜು<br>ಜಯಲಕ್ಷ್ಮಿ ಪುರಂ, ಮೈಸೂರು. | 2,005.00 |
| 4446. | ಶ್ರೀ ಎಸ್. ರುದ್ರಯ್ಯ<br>ವಿಜಯನಗರ, 2ನೇ ಸ್ಟೇಜ್, ಬೆಂಗಳೂರು. | 50,011.00 |
| 4447. | ಸಾಸಲು ಗ್ರಾಮಸ್ಥರು<br>ಕಿಕ್ಕೇರಿ ಹೋಬಳು, ಕೆ.ಆರ್. ಪೇಟೆ ತಾ॥ | 5,101.00 |
| 4448. | ಶ್ರೀ ಬಿ.ಬಿ ಪರಮೇಶ್, ಕಾಫಿ ಪ್ಲಾಂಟರ್<br>ಕುರುಬರಹಳ್ಳಿ ಅಂಚೆ, ಯಸಳೂರು ಮಾರ್ಗ. | 10,000.00 |
| 4449. | ಶ್ರೀ ಎನ್. ಮಂಜುನಾಥಸ್ವಾಮಿ<br>ಕುರುಬರಹಳ್ಳಿ ಅಂಚೆ, ಯಸಳೂರು ಮಾರ್ಗ. | 10,000.00 |
| 4450. | ಶ್ರೀಮತಿ ಸಿದ್ಧಮ್ಮ ಶ್ರೀ ಗಂಗಪ್ಪನವರು<br>ಕೆ.ಎನ್. ಬಡಾವಣೆ, ಯಶವಂತಪುರ, ಬೆಂ. | 10,001.00 |
| 4451. | ಮ್ಯಾನೇಜಿಂಗ್ ಡೈರಕ್ಟರ್<br>ಸಿದ್ಧಗಂಗಾ ಆಯಿಲ್ ಎಕ್ಸಾಟ್ರಕ್ಷನ್, ತುಮಕೂರು | 50,008.00 |
| 4452. | ಶ್ರೀ ಎಂ.ಯು. ಲೋಕೇಶ್ ಶ್ರೀಮತಿ ದೇವಿಕಲಾ<br>ನಿರಗುಂದ ಗ್ರಾಮ, ಕಡ್ಲಿಪೇಟೆ, ಸೋಮವಾರಪೇಟೆ. | 1,001.00 |
| 4453. | ಶ್ರೀ ಎಸ್.ವಿ. ಶಿವರುದ್ರಯ್ಯ<br>2ನೇ ಕ್ರಾಸ್, ಸಿದ್ಧಗಂಗಾ ಬಡಾವಣೆ, ತುಮಕೂರು. | 2,001.00 |
| 4454. | ಶ್ರೀ ಎನ್. ಮುರಿಗೇಂದ್ರಪ್ಪ<br>ಕೆ.ಆರ್. ಪುರಂ, ಬೆಂಗಳೂರು. | 3,001.00 |
| 4455. | ಶ್ರೀ ನೀತು ಎಂ.ಎಂ.<br>ಕೆ.ಆರ್. ಪುರ, ಬೆಂಗಳೂರು. | 3,006.00 |
| 4456. | ಶ್ರೀ ಹೆಚ್. ಜಯದೇವಯ್ಯ<br>ಮಾರೇನಹಳ್ಳಿ, ವಿಜಯನಗರ, ಬೆಂಗಳೂರು. | 30,000.00 |
| 4457. | ಶ್ರೀ ಬಿ. ಚಂದ್ರಶೇಖರಯ್ಯ, ಆರೋಗ್ಯ ಇಲಾಖೆ,<br>ಬನ್ನೇರುಘಟ್ಟ ರಸ್ತೆ, ಬೆಂಗಳೂರು. | 2,101.00 |
| 4458. | ಶ್ರೀಮತಿ ಗುರುತಾಯಮ್ಮ ಮತ್ತು ಶ್ರೀ ಹೆಚ್.ಪಿ. ಪುಟ್ಟಸ್ವಾಮಿ<br>ಆರ್.ಶ್ವೇತ ಮತ್ತು ಆರ್. ಗಿರೀಶ್, ಹಾಸಗೂಳಿ,<br>ಗುಂಡ್ಲುಪೇಟೆ ತಾ., ಚಾಮರಾಜನಗರ ಜಿಲ್ಲೆ. | 5,001.00 |
| 4459. | ಡಾ॥ ಬಿ. ಗುರುರಾಜ್ ಎಂ.ಬಿ.ಬಿ.ಎಸ್.<br>ಬಸ್ಸ್ಟ್ಯಾಂಡ್ ಎದುರು, ಹೊಸನಗರ. | 5,000.00 |
| 4460. | ಶ್ರೀ ಎಂ.ಬಿ. ಕುಮಾರ್ ಬಿನ್ ಎಂ. ಬಸಪ್ಪ, ಶಿಕ್ಷಕರು,<br>ಮಾಕವಳ್ಳಿ, ಮಾರಗೊಂಡನಹಳ್ಳಿ ಅಂ. | 2,001.00 |
| 4461. | ಶ್ರೀ ಚಂದ್ರಶೇಖರ್<br>ಪಟ್ಟೇಗಾರಪಾಳ್ಯ, ವಿಜಯನಗರ, ಬೆಂಗಳೂರು. | 5,000.00 |
| 4462. | ಶ್ರೀ ಬಿ.ಎನ್. ಸೋಮಪ್ಪಾಜಿ ಬಿನ್ ಪಟೇಲ್ ನಂಜಪ್ಪ<br>ಬೀಚೇನಹಳ್ಳಿ ಮತ್ತು ಅಂ., ಹೊಳೆನರಸೀಪುರ. | 1,001.00 |
| 4463. | ಶ್ರೀ ಎಸ್.ಪಿ. ಸುಗೇಶ್‌ಕುಮಾರ್<br>ವಿಗ್ನೋಣನಗರ ಅಂ., ಬೆಂಗಳೂರು. | 5,000.00 |
| 4464. | ಶ್ರೀ ಆರ್. ರವಿಚಂದರ್<br>100 ಅಡಿ ರಸ್ತೆ, ಕೋರಮಂಗಲ, ಬೆಂಗಳೂರು. | 10,000.00 |
| 4465. | ಶ್ರೀ ಜಿ.ಎಸ್. ಪಂಚಾಕ್ಷರಿ<br>ಬಿ.ಡಿ.ಎ. ನಾಗರಭಾವಿ, ಬೆಂಗಳೂರು. | 10,000.00 |
| 4466. | ಶ್ರೀ ಹೆಚ್.ಬಿ. ವೀರಭದ್ರಯ್ಯ<br>ಸುಬ್ರಮಣ್ಯನಗರ, ಬೆಂಗಳೂರು. | 2,016.00 |
| 4467. | ಶ್ರೀ ವಿಶ್ವನಾಥ ನಾಯ್ಡು ಸಿ.<br>ರಾಜೇಶ್ವರಿನಗರ, ಬೆಂಗಳೂರು. | 10,101.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 4468. | ಶ್ರೀ ಎಸ್.ಬಿ. ಮೋಹನ್ ರಾಜು ಬಿನ್ ಬಾಗೇಗೌಡ<br>ಸಿದ್ಧಾಪುರ, ಕಣತ್ತೂರು ಅಂ., ಆಲೂರು ತಾ., | 2,101.00 |
| 4469. | ಲೇಟ್ ಗುರುಶಾಂತಮ್ಮ ಮತ್ತು ಶಿವಾನಂದಯ್ಯ<br>3ನೇ ಬ್ಲಾಕ್, ದೇವಸಂದ್ರ, ಬೆಂಗಳೂರು. | 1,001.00 |
| 4470. | ಶ್ರೀ ವಿಶ್ವನಾಥ್ ವೈ.ಎ.ಬಿನ್. ಆಂಜಿನಪ್ಪ<br>ಯಲಿಯೂರು ಅಂ., ದೇವನಹಳ್ಳಿ ತಾ॥ | 2,500.00 |
| 4471. | ಶ್ರೀ ಜಿ.ಎಂ. ಗುರುದೇವಪ್ರಕಾಶ್ ಬಿನ್ ಮಹಾದೇವಯ್ಯ<br>ಬೆಳಕವಾಡಿ, ಮಳವಳ್ಳಿ ತಾ। ಮಂಡ್ಯ ಜಿಲ್ಲೆ. | 2,501.00 |
| 4472. | ಶ್ರೀ ಜಿ. ಕರಿಬಸಪ್ಪ, ನಿ. ಶಿಕ್ಷಕರು,<br>5ನೇ ಕ್ರಾಸ್, ವಿನೋಬಾನಗರ, ಶಿವಮೊಗ್ಗ. | 4,101.00 |
| 4473. | ಶ್ರೀ ಹರಪ್ರಸಾದ್ ಬಾಬು ಬಿನ್. ಎ.ಬಿ. ಜಯಶಂಕರ್<br>ಬಂಡೀಪಾಳ್ಯ, ಮೈಸೂರು. | 4,101.00 |
| 4474. | ಗುರುಭಕ್ತಿಭೂಷಣ ಶ್ರೀ ಪಿ. ಶಿವಶಂಕರ್<br>ಬಂಡೀಪಾಳ್ಯ, ಮೈಸೂರು. | 1,001.00 |
| 4475. | ಶ್ರೀ ಜಿ. ಮಹಲಿಂಗಯ್ಯ<br>ಅಶೋಕನಗರ, ತುಮಕೂರು. | 2,001.00 |
| 4476. | ಶ್ರೀ ಕೆ. ಬಸಪ್ಪಗೌಡ, ವಕೀಲರು,<br>ಕುವೆಂಪು ರಸ್ತೆ, ಶಿವಮೊಗ್ಗ. | 2,001.00 |
| 4477. | ಶ್ರೀಮತಿ ಸುಜಾತ ಮಹದೇವಪ್ಪ<br>ಚಂದ್ರವಾಡಿ. ಹುಲ್ಲಹಳ್ಳಿ ಹೊ., ಮೈಸೂರು ಜಿ. | 1,001.00 |
| 4478. | ಪಾರ್ವತಮ್ಮ ಬಿನ್ ಬಾದಾಮಿ ನಂಜಪ್ಪ<br>ಕೆ.ಆರ್. ಮೊಹಲ್ಲಾ, ಮೈಸೂರು. | 1,001.00 |
| 4479. | ಶ್ರೀ ಗುರುಸ್ವಾಮಿ ನಿ. ಡಿ.ಎಸ್.ಪಿ.<br>ದೇವನೂರು, ನಂಜನಗೂಡು ತಾ॥ ಮೈ.ಜಿಲ್ಲೆ. | 1,000.00 |
| 4480. | ಶ್ರೀಮತಿ ಜ್ಯೋತಿ ಬಿ. ಪಂಥ್, ಉಪನ್ಯಾಸಕರು,<br>ಶ್ರೀ.ಸಿ.ಶಿ.ಮ.ವಿ., ಬಿ.ಹೆಚ್.ರಸ್ತೆ, ತುಮಕೂರು. | 4,166.00 |
| 4481. | ಶ್ರೀಮತಿ ಸರೋಜಮ್ಮ ಡಿ.ಎಸ್. ಲಿಂಗದೇವರು ಮತ್ತು ಶ್ರೀಮತಿ ಎನ್. ಜಯಶ್ರೀ<br>ಬಸವೇಶ್ವರ ಬಡಾವಣೆ, ಕ್ಯಾತಸಂದ್ರ, | 20,001.00 |
| 4482. | ಶ್ರೀಮತಿ ಶಶಿಕಲಾ ಈ ಚಂದ್<br>ಚಂದ್ ಸ್ಟೀಲ್ ಕಾರ್ಪೊರೇಷನ್, ಬೆಳಗಾಂ. | 5,000.00 |
| 4483. | ನರಸಿಂಹರಾಜು<br>ಸೆಂಟ್ರಲ್ ಆರ್.ಟಿ.ಓ. ಬೆಂಗಳೂರು. | 10,005.00 |
| 4484. | ಶ್ರೀ ಡಿ.ಕೆ. ಹರೀಶ್ ಮತ್ತು ಕುಟುಂಬವರ್ಗ<br>ಮಲ್ಲೇಶ್ವರಂ, 1ನೇ ಕ್ರಾಸ್, ಬೆಂಗಳೂರು. | 1,001.00 |
| 4485. | ಶ್ರೀ ವೈ.ಸಿ. ಕಲ್ಲಿನಾಥ್ ಯರೇಸೀಮೆ<br>ರಾಜಾಜಿನಗರ ಕೈಗಾರಿಕಾ ಎಸ್ಟೇಟ್, ಬೆಂಗಳೂರು. | 50,000.00 |
| 4486. | ಶ್ರೀ ಟಿ.ಪಿ. ಶರತ್‌ಕುಮಾರ್ ಬಿನ್. ಟಿ.ಎಸ್. ಪಾಲನೇತ್ರ<br>ಯಲಹಂಕ ಉಪನಗರ, ಬೆಂಗಳೂರು. | 5,001.00 |
| 4487. | ಶ್ರೀ ಟಿ.ಎಸ್. ಪಾಲನೇತ್ರ<br>ಯಲಹಂಕ ಉಪನಗರ, ಬೆಂಗಳೂರು. | 5,001.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 4488. | ಶ್ರೀಮತಿ ನಾಗರತ್ನ ಸಿದ್ಧರಾಜು<br>ಹೊಸಕೋಟೆ, ಬೆಂಗಳೂರು. | 1,001.00 |
| 4489. | ಶ್ರೀ ರೇವಣ್ಣಸಿದ್ದಪ್ಪ ಕೇರಾಫ್ ಕೆ.ಬಿ. ಪ್ರಕಾಶ್<br>ಹೆ.ಎಸ್.ಆರ್. ಲೇಔಟ್, ಬೆಂಗಳೂರು. | 1,000.00 |
| 4490. | ಶ್ರೀ ಕೃಷ್ಣದಾಸ್, ಇಸ್ಕಾನ್ ಟೆಂಪಲ್,<br>ರಾಜಾಜಿನಗರ, ಬೆಂಗಳೂರು. | 2,000.00 |
| 4491. | ಶ್ರೀ ಬಿ. ಪ್ರಿಯದರ್ಶಿನಿ ಬಿನ್ ಜಿ. ಬಸವಣ್ಣ<br>ಜೋಗಾಪುರ ಅಂಚೆ, ಚಾಮರಾಜನಗರ ತಾ., | 2,000.00 |
| 4492. | ಶ್ರೀ ಎ.ಆರ್. ಇಂಡಸ್ಟ್ರೀಸ್<br>ಸದಾಶಿವನಗರ, ಬೆಂಗಳೂರು. | 2,001.00 |
| 4493. | ಶ್ರೀ ವಿ.ಬಿ. ಮಹೇಶ್ವರಪ್ಪ<br>ವಿಜಯನಗರ, ಬೆಂಗಳೂರು. | 2,001.00 |
| 4494. | ಮೆ॥ ಪ್ರೊಪ್ರೈಟರ್, ಬೆನಕ ಇಂ. ವರ್ಕ್ಸ್,<br>ರಾಜಾಜಿನಗರ, ಬೆಂಗಳೂರು. | 2,001.00 |
| 4495. | ಶ್ರೀ ಎಸ್.ಆರ್. ಮುನಿರಾಜಪ್ಪ, ಸ್ಕೂಲ್ ಮಾಸ್ಟರ್<br>ಅರಕೆರೆ ಅಂ., ಬೆಂಗಳೂರು ಉತ್ತರ ತಾ., | 2,001.00 |
| 4496. | ಶ್ರೀ ಬಿ.ಕೆ. ಉಮೇಶ್‌ಚಂದ್ರ<br>ಬೈರಸಂದ್ರ ಲೇಔಟ್, ಜಯನಗರ, ಬೆಂಗಳೂರು. | 2,001.00 |
| 4497. | ಶ್ರೀ ಎನ್.ಎಸ್. ನಂಜಪ್ಪ<br>ಶಂಕರನಗರ, ಬೆಂಗಳೂರು. | 5,001.00 |
| 4498. | ಡಾ॥ ಬಿ.ಪಿ. ಲಿಂಗರಾಜು, ಪ್ರೊಫೆಸರ್,<br>ಎಸ್.ಐ.ಟಿ. ಪಿ.ಜಿ.ಡಿ.ಎಂ.ಎಸ್. ತುಮಕೂರು. | 1,000.00 |
| 4499. | ಶ್ರೀ ಎಸ್. ನಾಗಣ್ಣ, ಸಂಪಾದಕರು,<br>ಪ್ರಜಾಪ್ರಗತಿ ದಿನಪತ್ರಿಕೆ, ತುಮಕೂರು. | 1,000.00 |
| 4500. | ಶ್ರೀ ಬಿ.ಎಸ್. ಪಾಟೀಲ್ ಐ.ಎ.ಎಸ್. ಮಾಜಿ ಮುಖ್ಯ<br>ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ. | 3,000.00 |
| 4501. | ಸಮನ್ವಯಾಧಿಕಾರಿಗಳು<br>ಕ್ಷೇತ್ರ ಸಂಪನ್ಮೂಲ ಕೇಂದ್ರ, ತುಮಕೂರು. | 12,091.00 |
| 4502. | ಶ್ರೀ ದುಂಡಯ್ಯ ಸಿದ್ಧಲಿಂಗಯ್ಯ ವಸ್ತ್ರದ<br>ಗದ್ದನಕೇರಿ ಮತ್ತು ಅಂಚೆ, ಬಾಗಲಕೋಟೆ ತಾ., | 30,000.00 |
| 4503. | ಶ್ರೀ ಜಿ.ಕೆ. ಪುಟ್ಟಲಿಂಗಪ್ಪ ನಿ. ಉಪಾಧ್ಯಾಯರು,<br>ಮಧುಗಿರಿ. | 3,000.00 |
| 4504. | ಶ್ರೀಮತಿ ತುಪ್ಪದ ವಸುಂದರಮ್ಮ ಮತ್ತು ಚಿಕ್ಕವೀರಭದ್ರಯ್ಯ<br>ಪ್ರಶಾಂತನಗರ್, ದೇವನಹಳ್ಳಿ, | 1,.00,001.00 |
| 4505. | ಶ್ರೀ ಪಂಪನಗೌಡ ಕೆ.<br>ಇಬ್ರಾಹಿಪುರ ಅಟ್& ಪೋಸ್ಟ್, ಬಳ್ಳಾರಿ ತಾ., | 1,000.00 |
| 4506. | ಶ್ರೀ ಆರ್. ಮಂಜುನಾಥ್, ಶಿವ ಫೈನಾನ್ಸ್<br>ಮತ್ತಾಲನಗರ, ಬೆಂಗಳೂರು. | 40,000.00 |
| 4507. | ಶ್ರೀ ಸಿ.ಎನ್. ಶಿವಕುಮಾರ್<br>ಬಸವೇಶ್ವರನಗರ, 2ನೇ ಸ್ಟೇಜ್, ಬೆಂಗಳೂರು. | 4,001.00 |

–ಮುಂದುವರೆಯುತ್ತದೆ.

RNI No. 17139/69 "Siddaganga" Monthly - Postal Reg. No. KA/SK/TMR/385/2006-08



ಜೂನ್ ೨೬ ರಂದು ಶ್ರೀಮಠದಲ್ಲಿ ನಡೆದ ಸರಳ ಸಮಾರಂಭದಲ್ಲಿ ಪೂಜ್ಯ ಶ್ರೀಗಳವರು 'ಯುಗಾಂತರ' ಮಾಸಪತ್ರಿಕೆಯನ್ನು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಸಂಪಾದಕ ಶ್ರೀ ತಮ್ಮಯ್ಯ ಮೊದಲಾದವರು ಉಪಸ್ಥಿತರಿದ್ದರು.



ಪರಮಪೂಜ್ಯ ಶ್ರೀಗಳವರು ಶ್ರೀಮಠದಲ್ಲಿ ಇತ್ತೀಚಿಗೆ ಶ್ರೀ ಸಿದ್ಧಗಂಗಾ ಮಹಿಳಾ ಪದವಿಪೂರ್ವ ಕಾಲೇಜಿನವರು ಹೊರತಂದ 'ಜೀವನಗಂಗೆ' ಜಾತ್ರೆ ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಿದರು.




ತುಮಕೂರು ರೋಟರಿ ಸೆಂಟ್ರಲ್ ವತಿಯಿಂದ ನಡೆದ ನೂತನ ಪದಾಧಿಕಾರಿಗಳ ಪದಗ್ರಹಣ ಸಮಾರಂಭದಲ್ಲಿ ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಹಾಗೂ ರೋಟರಿ ಪದಾಧಿಕಾರಿಗಳು ಉಪಸ್ಥಿತರಿದ್ದರು.




ತುಮಕೂರಿನಲ್ಲಿ ಏರ್ಪಡಿಸಲಾಗಿದ್ದ ಸಿದ್ಧಗಂಗಾ ಮಹಿಳಾ ಪದವಿಪೂರ್ವ ಕಾಲೇಜಿನ ವಾರ್ಷಿಕ ಚಟುವಟಿಕೆಗಳ ಉದ್ಘಾಟನೆಯನ್ನು ಕವಿ ಪ್ರೊ. ಕೆ.ಎಸ್. ನಿಸಾರ ಅಹಮದ್ ಅವರು ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಸಾನ್ನಿಧ್ಯದಲ್ಲಿ ನೆರವೇರಿಸಿದರು.



ತುಮಕೂರಿನ ರೈಲ್ವೆ ಸ್ಟೇಷನ್ ರಸ್ತೆಯಲ್ಲಿ ನೂತನವಾಗಿ ನಿರ್ಮಿಸಿರುವ ಅಕ್ಷರಾ ಕಣ್ಣಿನ ಅಸ್ಪತ್ರೆಯನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಜ್ಯೋತಿ ಬೆಳಗಿಸಿ ಲೋಕಾರ್ಪಣೆ ಮಾಡಿದರು.



ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದ್ದ ವಿವಿಧ ಕಾರ್ಯಕ್ರಮಗಳನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.